# ಮಕ್ಕಳ ಹಕ್ಕುಗಳು

## ಚರ್ಚೆಗಾಗಿ ಲೇಖನಗಳು

ವಾಸುದೇವ ಶರ್ಮಾ



ಸಂವಹನ ಪ್ರಕಾಶನ

# ಮಕ್ಕಳ ಹಕ್ಕುಗಳು

## ಚರ್ಚೆಗಾಗಿ ಲೇಖನಗಳು

ವಾಸುದೇವ ಶರ್ಮಾ



ಸಂವಹನ
41, 15 ನೇ ಅಡ್ಡ ರಸ್ತೆ, 100 ಅಡಿ ರಸ್ತೆ
ಜೆ.ಪಿ. ನಗರ 4ನೇ ಹಂತ, ಬೆಂಗಳೂರು-560 078.

Makkala Hakkugalu-Rights of the Children, a manual to understand the Convention on the Rights of the Child - CRC in Kannada by Vasudeva Sharma and published by SAMVAHANA, 41, 15th Cross, 100 ft. Road, J.P.Nagara 4th phase, Bangalore-560 078.

ಮೊದಲ ಆವೃತ್ತಿ : ಜುಲೈ 2000

ಪ್ರತಿಗಳು : 1000



ಮುಖಪುಟ, ಕಲೆ ಮತ್ತು ವಿನ್ಯಾಸ : **ಪ್ರವೀಣ್ ಜಿ.ಎಸ್.**

ಬೆಲೆ : ರೂ.**85**

ಈ ಪುಸ್ತಕದ ಮಾರಾಟದಿಂದ ಬರುವ ಲಾಭವನ್ನು
ಇದೇ ರೀತಿಯ ಪ್ರಕಟಣೆಗಳಿಗಾಗಿ ಬಳಸಲಾಗುತ್ತದೆ.

ಪ್ರಕಾಶಕರು :
**ಸಂವಹನ**
41, 15 ನೇ ಅಡ್ಡ ರಸ್ತೆ, 100 ಅಡಿ ರಸ್ತೆ,
ಜೆ.ಪಿ. ನಗರ 4ನೇ ಹಂತ, ಬೆಂಗಳೂರು-560 078.
Ph : 6652503, 6585744
email : vasulaks@bgl.vsnl.net.in

ಅಕ್ಷರ ಜೋಡಣೆ :
**ಶ್ರೀ ಪ್ರಿಂಟ್ ಸಲ್ಯೂಷನ್ಸ್**
ನಂ.5, ಬ್ಯೂಗಲ್‌ರಾಕ್ ರಸ್ತೆ,
ಬಸವನಗುಡಿ, ಬೆಂ-4.

ಮುದ್ರಕರು :
**ಧನಪಾಲ್ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್**
ಮನವರ್ತಿಪೇಟೆ, ಬೆಂಗಳೂರು-53.



# ಅರ್ಪಣೆ

ದುಃಸ್ಥಿತಿಯಲ್ಲಿರುವ ಮಕ್ಕಳ ಬದುಕನ್ನು ಹಸನು

ಮಾಡಲು ಕಂಕಣಬದ್ಧರಾಗಿ ದುಡಿಯುತ್ತಿರುವ

ಕ್ಷೇತ್ರ ಕಾರ್ಯಕರ್ತರಿಗೆ...

ಇಂದಿನ ಬದುಕು ಅನುಭವಿಸುತ್ತಾ

ನಾಳೆಯ ಕನಸನ್ನು ಕಾಣುತ್ತಿರುವ ಮಕ್ಕಳಿಗೆ....



# ಮುನ್ನುಡಿ

**ಮ**ಕ್ಕಳೆಂದರೆ ಎಲ್ಲರಿಗೂ ಅಪಾರ ಪ್ರೀತಿ. ಅನಾದಿ ಕಾಲದಿಂದಲೂ ಮಕ್ಕಳು ಮನೆಯ ಸಂಪತ್ತು ಎಂಬ ನಂಬಿಕೆ ಭಾರತೀಯ ಕುಟುಂಬಗಳಲ್ಲಿ ಬೇರೂರಿದೆ. ಎಲ್ಲಾ ತಂದೆ ತಾಯಂದಿರು ಮಕ್ಕಳ ಬೆಳವಣಿಗೆಗಾಗಿ ಚಿಂತಿಸದಿರುವುದಿಲ್ಲ.

ಆದರೆ ಇಂದು ಪರಿಸ್ಥಿತಿ ಭಿನ್ನವಾಗಿದೆ. ಒಮ್ಮೆ ಮನೆಯ ಹೊರಗೆ ಬಂದು ಕಣ್ಣು ಹಾಯಿಸಿದರೆ ಹೋಟೆಲ್, ಕಾರ್ಖಾನೆ, ಅಂಗಡಿ, ಗ್ಯಾರೇಜ್, ಕೃಷಿ, ಇತ್ಯಾದಿ ರಂಗಗಳಲ್ಲಿ ಮಕ್ಕಳು ಬೆಳಗಿನಿಂದ ಸಂಜೆಯವರೆಗೆ ದುಡಿಯುತ್ತಿರುವ ದೃಶ್ಯ ನಮ್ಮೆಲ್ಲರನ್ನೂ ಗಾಬರಿಗೊಳಿಸುತ್ತದೆ. ಸಕಾಲಕ್ಕೆ ಮಕ್ಕಳ ಶೂಗಳನ್ನು ಪಾಲೀಷ್ ಮಾಡಲಿಲ್ಲವೆಂಬ ಕಾರಣಕ್ಕಾಗಿ ಕಬ್ಬಿಣದ ಸರಳಿನಿಂದ ಹತ್ತು ವರ್ಷದ ಮಗುವಿನ ತಲೆಗೆ ಬಡಿದ ಅಮಾನವೀಯ ಕೃತ್ಯ ನಮ್ಮ ಕಣ್ಣು ಮುಂದೆಯೇ ನಡೆಯುತ್ತಿದೆ. ಇದೊಂದು ಉದಾಹರಣೆ ಮಾತ್ರ. ಆದರೆ ಇಂತಹ ಘಟನೆಗಳು ಸಾವಿರಾರು. ಈಗ ನಮ್ಮ ಮುಂದಿರುವ ಪ್ರಶ್ನೆ ಈ ಎಲ್ಲಾ ಕೃತ್ಯಗಳಿಗೆ ನಾವು ಕೇವಲ ಸಾಕ್ಷಿಗಳಾಗಿರಬೇಕೆ?

ಇಲ್ಲ! ಮಕ್ಕಳ ಮೇಲಿನ ಎಲ್ಲ ದೌರ್ಜನ್ಯಗಳನ್ನು ಖಂಡಿಸಬೇಕು. ಮಕ್ಕಳ ಸರ್ವಾಂಗೀಣ ಅಭಿವೃದ್ಧಿಗೆ ಪೂರಕವಾದ ಒಂದು ವಾತಾವರಣವನ್ನು ನಾವು ಸೃಷ್ಟಿಸಬೇಕು.

ಈ ದಿಕ್ಕಿನಲ್ಲಿ ಹಲವಾರು ವ್ಯಕ್ತಿಗಳು ಮತ್ತು ಸಂಘಟನೆಗಳು ಸಕ್ರಿಯವಾಗಿ ಕೆಲಸ ನಿರ್ವಹಿಸುತ್ತಿವೆ. ಮಕ್ಕಳ ಹಕ್ಕುಗಳ ರಕ್ಷಣೆಗಾಗಿ ಅಂತಾರಾಷ್ಟ್ರೀಯ ಮಟ್ಟದಲ್ಲಿ ಮಕ್ಕಳ ಹಕ್ಕುಗಳ ಒಡಂಬಡಿಕೆ ಜಾರಿಯಲ್ಲಿದೆ. ಮಕ್ಕಳ ಒಳಿತಿಗಾಗಿ ಕೆಲಸ ನಿರ್ವಹಿಸುತ್ತಿರುವ ನಮಗೆ ಈ ಒಡಂಬಡಿಕೆಯ ಪೂರ್ಣ ಮಾಹಿತಿಯಲ್ಲದಿದ್ದರೂ ಸಾಮಾನ್ಯ ಅರಿವು ಅತ್ಯವಶ್ಯಕವಾಗಿದೆ.

ಈ ನಿಟ್ಟಿನಲ್ಲಿ ಗೆಳೆಯ ವಾಸುದೇವ ಶರ್ಮಾ ಅವರ ಪ್ರಯತ್ನ ಅರ್ಥಪೂರ್ಣವಾಗಿದೆ. ಅವರ ಈ ಪುಸ್ತಕ ಮಕ್ಕಳ ರಕ್ಷಣೆ ಮತ್ತು ಒಳಿತಿಗಾಗಿ ದುಡಿಯುತ್ತಿರುವ ಎಲ್ಲಾ ಜನರಿಗೆ ಮಾತ್ರವಲ್ಲದೆ ಮಕ್ಕಳ ಭವಿಷ್ಯ ರೂಪಿಸವ ಜವಾಬ್ದಾರಿ ಹೊತ್ತಿರುವ ಸಮಸ್ತ ನಾಗರೀಕರಿಗೆ ಉತ್ತಮ ಮಾರ್ಗದರ್ಶಿಯಾಗಲಿ ಎಂದು ಹಾರೈಸುತ್ತೇನೆ.

ದಿನಾಂಕ : 20 ಜೂನ್ 2000
ಬೆಂಗಳೂರು.

**ಪ್ರೊ. ಬಾಬು ಮ್ಯಾಥ್ಯೂ**
ಕಾನೂನು ಪ್ರಾಧ್ಯಾಪಕರು ಮತ್ತು ಕುಲ ಸಚಿವರು,
ಭಾರತೀಯ ವಿಶ್ವವಿದ್ಯಾನಿಲಯದ ರಾಷ್ಟ್ರೀಯ ಕಾನೂನು ಶಾಲೆ.

# ನಿಮ್ಮೊಡನೆ

ಪ್ರಿಯರೇ,

**ಮ**ಕ್ಕಳ ಹಕ್ಕುಗಳ ಒಡಂಬಡಿಕೆ (Convention on the Rights of the Child) ಅಂತಾರಾಷ್ಟ್ರೀಯ ಮಟ್ಟದಲ್ಲಿ ಜಾರಿಗೆ ಬಂದು ಹತ್ತು ವರ್ಷಗಳಾಯಿತು (1989-99). ವಿಶ್ವಸಂಸ್ಥೆಯಿಂದ ಮುಂದಿಡಲ್ಪಟ್ಟ ಒಡಂಬಡಿಕೆ ಮಕ್ಕಳ ಬದುಕಿನ ಹಲವಾರು ವಿಚಾರಗಳ ಬಗ್ಗೆ ಸರಿ ತಪ್ಪುಗಳನ್ನು ನಿರ್ದೇಶಿಸುತ್ತದೆ. ಮಕ್ಕಳ ಬದುಕನ್ನು ಹಸನು ಮಾಡಿ ಎಂದು ದೊಡ್ಡವರು, ವಯಸ್ಕರು, ಹಿರಿಯರು, ಪೋಷಕರು, ಸಮುದಾಯಗಳು, ಸ್ವಯಂಸೇವಾ ಸಂಸ್ಥೆಗಳು, ದಾನಿ ಸಂಸ್ಥೆಗಳು, ವಿದ್ಯಾ ಸಂಸ್ಥೆಗಳು, ಮಾರುಕಟ್ಟೆ, ಮಾಧ್ಯಮಗಳು ಹಾಗೂ ಜನ ಪ್ರತಿನಿಧಿಗಳನ್ನು ಈ ಒಡಂಬಡಿಕೆ ಕೇಳಿಕೊಳ್ಳುತ್ತಿದೆ.

1992ರಲ್ಲಿ ಮಕ್ಕಳ ಹಕ್ಕುಗಳ ಒಡಂಬಡಿಕೆಗೆ ಭಾರತ ಸಹಿ ಹಾಕಿತು. ಆದಾಗ್ಯೂ ಮಕ್ಕಳ ಹಕ್ಕು ಭಾರತದಲ್ಲಿ ಮನೆ ಮಾತಾಗಿಲ್ಲ; ಎಲ್ಲರ ದಿನ ನಿತ್ಯದ ಬದುಕಿನಲ್ಲಿ ಸೇರಿಹೋಗಿಲ್ಲ. ಒಡಂಬಡಿಕೆ ಕುರಿತಾಗಿ ಅನೇಕರಿಗೆ ತಿಳಿವಳಿಕೆ ಇಲ್ಲ. ಮಕ್ಕಳ ಹಕ್ಕುಗಳ ಬಗ್ಗೆ ಕಳೆದ ಐದಾರು ವರ್ಷಗಳಿಂದ ಹೆಚ್ಚು ಹೆಚ್ಚು ಮಾತುಕತೆ ನಡೆಯುತ್ತಿದೆ. ಆದರೂ ಒಡಂಬಡಿಕೆಯ ಬಗ್ಗೆ ಜನರಿಗೆ ತಿಳಿಸುವ, ಅದರ ಸಾರವನ್ನು ತಲುಪಿಸುವ ಪ್ರಯತ್ನಗಳು ಬಹಳ ಕಡಿಮೆ. ಮಕ್ಕಳ ಹಕ್ಕುಗಳ ಬಗ್ಗೆ ವಿಶ್ಲೇಷಿಸುವ ಅಥವಾ ಕೇವಲ ಒಡಂಬಡಿಕೆಯನ್ನು ಮಾತ್ರ ಹೇಳುವ ಪುಸ್ತಕಗಳು ಇವೆ. ಆದರೆ ಅವು ಯಾವುವೂ ಸಾಮಾನ್ಯ ಓದುಗರಿಗೆ ಅದರಲ್ಲೂ ಸ್ವಯಂ ಸೇವಾ ಸಂಘಗಳ ಕಾರ್ಯಕರ್ತರಿಗೆ ಹಾಗೂ ಸರಕಾರಿ ಇಲಾಖೆಗಳ ನೌಕರರಿಗೆ ಹಕ್ಕುಗಳ ಬಗ್ಗೆ ಅರಿಯಲು ಸಾಮಗ್ರಿ ನೀಡುವುದಿಲ್ಲ. ಹಕ್ಕುಗಳ ಮಾತೆಂದರೆ, ಅದು ರಾಷ್ಟ್ರೀಯ, ಅಂತಾರಾಷ್ಟ್ರೀಯ ಮಟ್ಟದ ಚರ್ಚೆಗಳಿಗೆ ಸೀಮಿತವಾಗಿದ್ದು ಎಂಬ ಮಾತೂ ಇದೆ. ಈ ಹಕ್ಕುಗಳನ್ನು ನಮ್ಮ ಸಮುದಾಯಗಳ ಮಟ್ಟದಲ್ಲಿ ನೋಡುವ, ಪ್ರತಿಯೊಂದು ಹಕ್ಕನ್ನೂ ವಿಶ್ಲೇಷಿಸಿ, ಅರ್ಥ ಮಾಡಿಕೊಳ್ಳಲು ಸಹಾಯ ಮಾಡಲು ಈ ಪುಸ್ತಕವನ್ನು ನಿಮ್ಮ ಮುಂದಿಟ್ಟಿದ್ದೇನೆ. ವಿವಿಧ ಸಮುದಾಯ ಗಳೊಡನೆ, ಮಕ್ಕಳೊಡನೆ ನಡೆಸಿದ ಹಲವಾರು ಕಾರ್ಯಾಗಾರಗಳನ್ನು ಆಧರಿಸಿ ಇಲ್ಲಿರುವ ಲೇಖನಗಳನ್ನು ನಾನು ಸಿದ್ಧಪಡಿಸಿದ್ದೇನೆ. ಲೇಖನಗಳುದ್ದಕ್ಕೂ ಪ್ರಶ್ನೆಗಳನ್ನೇ ಹೆಚ್ಚಾಗಿ ಎತ್ತಿದ್ದೇನೆ. ಇಡೀ ಲೇಖನಗಳ ಉದ್ದೇಶ ನಮ್ಮನ್ನು ನಾವೇ ಪ್ರಶ್ನಿಸುವುದು, ಉತ್ತರಗಳಿಗಾಗಿ ನಮ್ಮ ಸುತ್ತಮುತ್ತಲಲ್ಲಿ ಹುಡುಕಾಡುವುದು.

ಮೇಲೆ ಹೇಳಿರುವಂತೆ, ನಮ್ಮೆದುರು ಪ್ರಶ್ನೆಗಳೇ ಅನೇಕ. ಆದರೆ, ಈ ಪ್ರಶ್ನೆಗಳು ಕೇವಲ ಪ್ರಶ್ನೆಗಳಾಗಿಯೇ ಉಳಿಯಬಾರದು. ಸಿಗುವ ಉತ್ತರಗಳೂ ಸಹ ಸಾರ್ವತ್ರಿಕ ಸತ್ಯಗಳಾಗಿರುವುದಿಲ್ಲ. ಹೀಗಾಗಿ ನಾವು ಕಂಡುಕೊಂಡ ಉತ್ತರ, ಮಾಹಿತಿಗಳನ್ನು ನಿಗದಿತ ಸಮಯಗಳಲ್ಲಿ ಒರೆ ಹಚ್ಚಿ, ಹಿಂದಿನ ಮತ್ತು ಇಂದಿನ ಸಂಗತಿಗಳಿಗೆ ತುಲನೆ ಮಾಡಿಕೊಳ್ಳುತ್ತಿರಬೇಕು.

ಈ ಪ್ರಶ್ನೆಗಳೆಲ್ಲವೂ ಬಂದಿರುವುದು ಒಂದು ದೇಶಕಾಲಗಳ ಪರಿಸ್ಥಿತಿಗೆ ಪ್ರತಿಕ್ರಿಯೆಯಾಗಿ. ನಮ್ಮ ಪರಿಸರದಲ್ಲಿ ಇಂತಹ ಪ್ರಶ್ನೆಗಳನ್ನು ಎತ್ತಿ, ಉತ್ತರಗಳು ಕಂಡಾಗ ಯಾರಿಗೂ ಅವೆಲ್ಲವನ್ನು ನೋಡುತ್ತಾ ಸುಮ್ಮನಿರಲಾಗದು. ಇವು ನಿಮ್ಮ ನಿಮ್ಮ ಚಿಕ್ಕ ಪುಟ್ಟ ಸಮುದಾಯಗಳಿಗೆ ಸಂಬಂಧಿಸಿರುವುದಾದ್ದರಿಂದ, ನೀವೇ ಏನಾದರೂ ಮಾಡಲು ಕೈ ಹಾಕಬಹುದು. ಅಥವಾ ಈಗಾಗಲೇ ಅಂತಹವನ್ನು ಕೈಗೊಂಡಿರಬಹುದು ಅಥವಾ ನಿಮ್ಮಿಂದ ಯಾವುದೇ ಯೋಜನೆ ಮಾಡಲಾಗದಿರಬಹುದು. ಇಲ್ಲಿರುವ ಪ್ರಶ್ನೆಗಳಿಗೆ ಪ್ರತಿಕ್ರಿಯೆಯಾಗಿ ನಿಮ್ಮ ಬಳಿ ಸಂಗ್ರಹವಾಗುವ ಮಾಹಿತಿಯನ್ನು ಸಂಬಂಧಪಟ್ಟ ಇಲಾಖೆ, ನಿರ್ದೇಶನಾಲಯಗಳೊಡನೆ ಹಂಚಿಕೊಳ್ಳಿ. ಸಂಬಂಧಪಟ್ಟ ಮಂತ್ರಿಗಳಿಗೆ ಬರೆದು ಪ್ರತಿಕ್ರಿಯೆಗೆ ಒತ್ತಾಯಿಸಿ. ಇಷ್ಟು ಹೇಳಿದ ಮೇಲೆ ಒಂದು ವಿಚಾರ ಸ್ಪಷ್ಟವಾಗಿರಬಹುದು. ಈ ಪುಸ್ತಕ ಸಾಮಾನ್ಯ ಓದುಗರಿಗೆ, ಸ್ವಯಂ ಸೇವಾ ಸಂಘಟನೆಗಳಿಗೆ, ಮಕ್ಕಳೊಡನೆ ಕೆಲಸ ಮಾಡುವ ಕ್ರಿಯಾಶೀಲರಿಗೆ, ಕಾರ್ಯಕರ್ತರಿಗೆ, ತರಬೇತಿದಾರರಿಗೆ ಹಾಗೂ ವಿದ್ಯಾರ್ಥಿಗಳಿಗೆ ಎಂಬುದು. ಪುಸ್ತಕದಲ್ಲಿರುವ ಪ್ರಶ್ನೆಗಳು, ಮಾಹಿತಿಗಳನ್ನು ನಿಮ್ಮ ಮಾತುಕತೆ, ತರಬೇತಿ, ಬರಹ, ಭಾಷಣ, ಸಂಕಿರಣಗಳಲ್ಲಿ ನಿಮ್ಮ ವಿಶ್ಲೇಷಣೆಯೊಡನೆ ಬಳಸಿ ಇತರರೊಡನೆ ಹಂಚಿಕೊಳ್ಳಿ.

ಮಕ್ಕಳ ಹಕ್ಕುಗಳ ಒಡಂಬಡಿಕೆಯ 54 ಅನುಚ್ಛೇದಗಳು ಈ ಪುಸ್ತಕದಲ್ಲಿ ಬೇರೆ ಬೇರೆ ಭಾಗಗಳಲ್ಲಿ ಕಂಡು ಬರುತ್ತದೆ. ಅವು ಒಡಂಬಡಿಕೆಯ ನೇರ ಅನುವಾದವಲ್ಲ, ಅವುಗಳ ಭಾವ, ಆಶಯವನ್ನು ಮಾತ್ರ ವ್ಯಕ್ತಪಡಿಸಲಾಗಿದೆ. ಅಲ್ಲಲ್ಲಿ ಅರ್ಥ ಮಾಡಿಕೊಳ್ಳಲು ಉದಾಹರಣೆಗಳೂ ಇವೆ.

ಈ ನಡುವೆ 1997ರಲ್ಲಿ ಭಾರತ ಸರ್ಕಾರವು 'ಮಕ್ಕಳ ಹಕ್ಕುಗಳ ಜಾರಿ' ಹೇಗೆ ಸಾಗಿದೆ ಎಂಬುದರ ಬಗ್ಗೆ ವಿಶ್ವಸಂಸ್ಥೆಗೆ ವರದಿ ನೀಡಿದೆ. ಈ ಬಗ್ಗೆ 1999ರ ಜೂನ್‌ನಲ್ಲಿ ವಿಶ್ವಸಂಸ್ಥೆಯ ಸಮಿತಿ ಪ್ರತಿಕ್ರಿಯಿಸಿ ಒಂದಷ್ಟು ಪ್ರಶ್ನೆಗಳು, ಅನುಮಾನಗಳಿಗೆ ವಿವರಣೆಗಳನ್ನು ಕೋರಿತು. ಮತ್ತೆ ಭಾರತವು 1999ರ ಡಿಸೆಂಬರ್ ಹಾಗೂ 2000ದ ಜನವರಿಯಲ್ಲಿ ತನ್ನ ಉತ್ತರಗಳನ್ನು ಕಳುಹಿಸಿದೆ. ಅದೇ ರೀತಿ ಏಳು ಸ್ವತಂತ್ರ ವರದಿಗಳನ್ನು ಸ್ವಯಂಸೇವಾ ಸಂಘಗಳ ಸಂಘಟನೆಗಳು, ಚಳವಳಿಗಳು ಸಲ್ಲಿಸಿವೆ. ಭಾರತದ ವರದಿಯ ವಿಚಾರಣೆಯ ಸಂದರ್ಭದಲ್ಲಿ ಇವುಗಳನ್ನು ಪರಾಮರ್ಶಿಸಲಾಗಿದೆ. ಇವುಗಳ ಬಗ್ಗೆ ಈ ಪುಸ್ತಕದಲ್ಲಿ ಹೆಚ್ಚಿನ ಪ್ರಸ್ತಾಪ ಇಲ್ಲ. ಮುಂದಿನ ಪ್ರಯತ್ನದಲ್ಲಿ ಬರುವ ಯೋಜನೆ ಇದೆ.

ಈ ಪುಸ್ತಕದ ಲೇಖನಗಳನ್ನು ಮತ್ತೆ ಮತ್ತೆ ಬರೆಯುವ, ತಿದ್ದುವ, ಇನ್ನೂ ಸ್ಪಷ್ಟಮಾಡುವ ಉದ್ದೇಶ ನನ್ನದು. ಓದುಗರೇ, ನಿಮಗೆ ಸಲಹೆಗಳನ್ನು ನೀಡುವ, ಅಭಿಪ್ರಾಯಗಳನ್ನು ಹಂಚಿಕೊಳ್ಳುವ ಮನಸ್ಸಿದ್ದರೆ ದಯಮಾಡಿ ನನಗೆ ಬರೆಯಿರಿ. ಈ ಲೇಖನಗಳನ್ನು ನಿಮಗೆ ಅನುಕೂಲವಾದಂತೆ ಮಕ್ಕಳನ್ನು ಕುರಿತಾದ ವಿಚಾರಗಳ ತರಬೇತಿ, ಚರ್ಚೆ, ಪ್ರಚಾರಗಳಿಗೆ ಬಳಸಬಹುದು.

ಈ ಲೇಖನಗಳು ಹೊರಬರಲು ಕಾರಣ CRY-ಚೈಲ್ಡ್ ರಿಲೀಫ್ ಅಂಡ್ ಯು, CACL- ಬಾಲಕಾರ್ಮಿಕ ಪದ್ಧತಿ ವಿರೋಧಿ ಆಂದೋಲನ ಮತ್ತು ಮೈತ್ರಿ ಸರ್ವ ಸೇವಾ ಸಂಸ್ಥೆಯವರೊಡಗೂಡಿ ಯೂನಿಸೆಫ್ ಮತ್ತು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗಾಗಿ ನಡೆಸಿದ ತರಬೇತಿಯ ಅನುಭವಗಳು. ಇವರಿಗೆ ನಾನು ಆಭಾರಿ. ಅದಕ್ಕಿಂತಲೂ ಹೆಚ್ಚಾಗಿ ಬರಹಗಳಿಗೆ ಪ್ರೇರಕವಾದದ್ದು ನಿಪ್ಸಿಡ್ (NIPCCD) 1994ರಲ್ಲಿ ಮಕ್ಕಳ ಹಕ್ಕುಗಳ ಬಗ್ಗೆ ಕಾರ್ಯಕ್ರಮ ನಡೆಸಿ ಕೊಡಿ ಎಂದು ನನಗೆ ನೀಡಿದ ಆಹ್ವಾನ. ಆಗ ಆರಂಭವಾದ ಅಭ್ಯಾಸ ಈಗಲೂ ಮುಂದುವರಿದಿದೆ. ಈ ಲೇಖನಗಳನ್ನು ಬರೆಯುವಾಗ ನನಗೆ ಸಹಾಯ ಮಾಡಿದ ನನ್ನ ತಂದೆ, ನೆ. ವಿಶ್ವನಾಥ, ಹಲವಾರು ಮುಖ್ಯ ವಿಚಾರಗಳನ್ನು ಸದಾ ನನ್ನ ಗಮನಕ್ಕೆ ತರುತ್ತಿರುವ ಹಾಗೂ ಕೊನೆಯ ಹಂತದ ಸಂಪಾದನೆ ಮಾಡಿಕೊಟ್ಟ ನನ್ನ ಪತ್ನಿ ಎನ್. ಲಕ್ಷ್ಮಿ, ಲೇಖನದ ಕರಡು ತಿದ್ದಿದ ಗೆಳತಿ ಸುಮತಿ ಡಿ.ಜಿ. ವಿವಿಧ ಹಂತಗಳಲ್ಲಿ ಲೇಖನಗಳನ್ನು ಓದಿ ತಮ್ಮ ಅಭಿಪ್ರಾಯಗಳನ್ನು ನೀಡುತ್ತಿರುವ ಸ್ವಯಂಸೇವಾ ಸಂಘಗಳ ಗೆಳೆಯರಿಗೆ ಹಾಗೂ ನನ್ನ ಸಹೋದ್ಯೋಗಿಗಳಿಗೆ ನಾನು ಆಭಾರಿ. ಇಲ್ಲಿನ ಲೇಖನಗಳನ್ನು ತಮ್ಮ ಕ್ಷೇತ್ರಾನುಭವದ ಹಿನ್ನೆಲೆಯಲ್ಲಿ ವಿಮರ್ಶಿಸಿ ಪ್ರೋತ್ಸಾಹಿಸಿದ ಗೆಳತಿ ಕವಿತಾ ರತ್ನಾರಿಗೆ ವಿಶೇಷವಾದ ಕೃತಜ್ಞತೆಗಳು. ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ ಯೂನಿವರ್ಸಿಟಿಯ ರಿಜಿಸ್ಟ್ರಾರ್ ಶ್ರೀ ಬಾಬು ಮ್ಯಾಥ್ಯೂ ಅವರು ಪುಸ್ತಕದ ಕಲ್ಪನೆಯ ಬಗ್ಗೆ ಹೇಳಿದಾಗ ಆಸಕ್ತಿ ತೋರಿ, ಓದಿ ಮುನ್ನುಡಿ ಬರೆದುಕೊಟ್ಟಿದ್ದಾರೆ. ಅವರಿಗೂ ನಾನು ಆಭಾರಿ. ಈ ಹಂತದಲ್ಲಿ ಸಹಾಯ ಮಾಡಿದ ಗೆಳೆಯ ನಿರಂಜನಾರಾಧ್ಯರಿಗೂ ಧನ್ಯವಾದ.

ಮಕ್ಕಳ ಹಕ್ಕುಗಳ ಬಗ್ಗೆ ಓದಿ ಬರೆದು ಅಭ್ಯಾಸ ಮಾಡುವಾಗ ನನ್ನ ಮಗಳು ಶ್ರದ್ಧಾಳ ಮೂಲಭೂತ ಹಕ್ಕಾದ ಆಟ, ಕತೆ, ಸಂಗಕ್ಕೆ ಕತ್ತರಿ ಬಿದ್ದಿತ್ತು. ಅದನ್ನೆಲ್ಲಾ ತಾಳಿಕೊಂಡ ಶ್ರದ್ಧಾಳಿಗೆ ಪ್ರೀತಿಯ ಕೃತಜ್ಞತೆಗಳು.

ಪುಸ್ತಕ ಓದುಗರ ಕೈಗೆ ಬರಲು ಅಂದವಾದ ಪುಟವಿನ್ಯಾಸ, ಮುಖಪುಟ ತಯಾರಿಸಿಕೊಟ್ಟ ಗೆಳೆಯ ಪ್ರವೀಣ್ ಜಿ.ಎಸ್. ಹಾಗೂ ಶ್ರೀ ಪ್ರಿಂಟ್ ಸಲ್ಯೂಷನ್ಸ್‌ನ ಶ್ರೀಧರ್‌ರವರಿಗೂ ವಂದನೆಗಳು. ತರಬೇತಿ ನಡೆಸಲು, ಲೇಖನ ಬರೆಯಲು ಪ್ರೇರಣೆ ನೀಡುತ್ತಿರುವ ತರಬೇತಿದಾರರ ಸಮುಚ್ಚಯವನ್ನು ನಾನಿಲ್ಲಿ ನೆನೆಯಲೇಬೇಕು.

-ವಾಸುದೇವ ಶರ್ಮಾ

# ಪರಿವಿಡಿ

# ಮಕ್ಕಳ ಹಕ್ಕುಗಳು

**ಹಕ್ಕುಗಳು... ಏನು ಹಾಗೆಂದರೆ ? ಹಕ್ಕುಗಳು ಹೇಗೆ ಬಂದಿತು ? ಯಾರ ಹಕ್ಕುಗಳು ? ಯಾರು ಯಾರಿಗೆ ಹಕ್ಕುಗಳನ್ನು ಕೊಡಬೇಕು? ಯಾಕೆ ನಾವು ಹಕ್ಕುಗಳ ಬಗ್ಗೆ ತಿಳಿದುಕೊಳ್ಳಬೇಕು ?**

ಈ ಎಲ್ಲವೂ ನಿಜವಾದ ಪ್ರಶ್ನೆಗಳು ಸಾಮಾನ್ಯವಾಗಿ ಮೇಲಿನ ಪ್ರಶ್ನೆಗಳಲ್ಲಿ ಕೆಲವಕ್ಕಾದರೂ ವಯಸ್ಕರಿಗೆ ಉತ್ತರ ತಿಳಿದಿರುತ್ತದೆ. 'ಓಟು ನೀಡುವ ಹಕ್ಕು, ಮಾತನಾಡುವ ಹಕ್ಕು, ಜೊತೆಯಾಗಿರುವ ಹಕ್ಕು, ಸಂಚಾರದ ಹಕ್ಕು, ಇತರರಿಗೆ ತೊಂದರೆ ಕೊಡದ ಉದ್ಯೋಗ, ವ್ಯವಹಾರ ಮಾಡಿ ಸಂಪಾದಿಸುವ ಹಕ್ಕು..' ಹೀಗೆ ಕೆಲವನ್ನಾದರೂ ಕೇಳಿದ್ದೇವೆ.

ಭಾರತದ ಸಂವಿಧಾನದತ್ತವಾದ ಹಕ್ಕುಗಳನ್ನು ಕೇಳಿರುವ ಅಥವಾ ಓದಿರುವ ನೆನಪು ಕೆಲವರಿಗಾದರೂ ಇರುತ್ತದೆ. 'ಹಕ್ಕು' ಕೇವಲ ಪುಸ್ತಕದ ವಿಚಾರವಲ್ಲ. ಅಕಸ್ಮಾತ್ ಹಕ್ಕುಗಳನ್ನು ನಿರ್ಲಕ್ಷಿಸುವ ಅಥವಾ ನಿರಾಕರಿಸುವ ಪರಿಸ್ಥಿತಿ ಬಂದಾಗ ಅವುಗಳ ಪ್ರತಿಪಾದನೆಗೆ, ಜಾರಿಗೆ ಸಹಾಯ ಒದಗುವ ಸಹಾಯ ಸೌಲಭ್ಯ ಇದ್ದರೆ ಮಾತ್ರ ಹಕ್ಕುಗಳಿಗೆ ಬೆಲೆ.

ಕಳೆದ ವರ್ಷ (1998) 'ಮಾನವ ಹಕ್ಕುಗಳ ಸುವರ್ಣ ಮಹೋತ್ಸವ' ಆಚರಿಸಿದೆವು. ಮಾನವ ಹಕ್ಕುಗಳು 1948ರಲ್ಲಿ ವಿಶ್ವಸಂಸ್ಥೆಯು ಅಂಗೀಕರಿಸಿ ಎಲ್ಲ ದೇಶಗಳೂ ಜಾರಿಗೆ ತರಬೇಕೆಂದು ಹೇಳಿರುವ ಕಟ್ಟುಪಾಡುಗಳು. 'ಯಾರಿಗೂ ಯಾರಿಂದಲೂ ಯಾವುದೇ ರೀತಿಯ ಅನ್ಯಾಯ ಎಂತಹ ಸಂದರ್ಭದಲ್ಲಿಯೂ ಆಗಬಾರದು' ಎಂದು ಖಡಾಖಂಡಿತವಾಗಿ ಹೇಳುವುದು ಇದರ ಆಶಯ. ಜಗತ್ತಿನ ಎಲ್ಲರಿಗೂ ಇದು ಅನ್ವಯಿಸುತ್ತದೆ. ಎಲ್ಲರಿಗೂ ಹಕ್ಕುಗಳ ಬಗ್ಗೆ ಅರಿವಿರಬೇಕು ಎಂಬುದೂ ಇಲ್ಲಿನ ಪ್ರಮುಖ ವಿಚಾರ.

ವಯಸ್ಕರಿಗೆ ಹಕ್ಕುಗಳ ಬಗ್ಗೆ ಸಾಮಾನ್ಯ ಜ್ಞಾನವಿದೆ ಎಂದಿಟ್ಟುಕೊಳ್ಳೋಣ. ಆದರೆ ಮಕ್ಕಳಿಗೆ ತಮ್ಮ ಹಕ್ಕುಗಳ ಬಗ್ಗೆ ಏನು ತಿಳಿದಿದೆ ? ಮಕ್ಕಳಿಗೆ ಇದ್ಯಾವ ಹಕ್ಕು ?! ಅವರಿಗೆ ಏನು ತಿಳಿಯುವುದು ಎಂದು ಯಾರಾದರೂ ಹುಬ್ಬೇರಿಸುವ ಮೊದಲೇ ಇನ್ನೂ ಒಂದೆರಡು ಸಂಗತಿಗಳನ್ನು ಹೇಳುವುದು ಸರಿಯೆನಿಸುತ್ತದೆ.

ಮಕ್ಕಳಿಗೆ ತಮ್ಮ ಹಕ್ಕುಗಳ ಬಗ್ಗೆ ತಿಳಿದಿರುವುದಿರಲಿ ಎಷ್ಟೋ ವಯಸ್ಕರಿಗೂ ತಿಳಿದಿಲ್ಲ. ಮಕ್ಕಳ ಹಕ್ಕುಗಳನ್ನು ನಿರ್ಲಕ್ಷಿಸುತ್ತಾ ಬದುಕುವವರೇ ಬಹಳ ಮಂದಿ. ಇಂತಹ ಪರಿಸ್ಥಿತಿಯಲ್ಲಿ ಮಕ್ಕಳಿಗೆ ಹಕ್ಕುಗಳಿವೆ ಎಂಬುದರ ಕುರಿತು ಹೆಚ್ಚಿನ ಚಿಂತನೆ, ಸಂಶೋಧನೆ, ಪ್ರಚಾರ ನಡೆಯುತ್ತಿಲ್ಲ.

ಹೀಗಿರುವಾಗ ನಮ್ಮ ಸುತ್ತಮುತ್ತ ಎಲ್ಲಿ ನೋಡಿದರೂ ಶಾಲೆ ಕಾಣದ ಮಕ್ಕಳು, ದುಡಿದು ಹಣ್ಣಾಗುವ, ಚಿಕ್ಕವಯಸ್ಸಿನಲ್ಲಿಯೇ ವಯಸ್ಕರಂತೆ ಬಾಳುವ, ಅಕಾರಣ ಸಾಯುವ ಮತ್ತು ಅನಾಥರಾಗಿ ದಾರಿ ಕಾಣದೆ ಮಕ್ಕಳು ಹಾಗೇ ಉಳಿದುಕೊಂಡಿರುವುದು ಕಟುಸತ್ಯ. ಇಂತಹ ಶೋಚನೀಯ ಪರಿಸ್ಥಿತಿಗಳನ್ನು ತಪ್ಪಿಸಲೆಂದೇ 'ಮಕ್ಕಳ ಹಕ್ಕುಗಳ' ಕಲ್ಪನೆ ಮೂಡಿದ್ದು. 1920ರ ದಶಕದ ಆಸುಪಾಸಿನಲ್ಲಿ ಆರಂಭವಾಗಿದ್ದ 'ಮಾನವ ಹಕ್ಕು'ಗಳ ಕಲ್ಪನೆಯಲ್ಲಿ ಮಕ್ಕಳ ವಿಚಾರಗಳಿಗೆ ಅಂತಹ ಪ್ರಾಮುಖ್ಯತೆ ಇಲ್ಲ ಎಂಬ ವಾದವೂ ಇದಕ್ಕೆ ಪುಷ್ಟಿಕೊಡುತ್ತದೆ. ಜೊತೆಗೆ ಜಗತ್ತಿನ ಬಹುತೇಕ ರಾಷ್ಟ್ರಗಳು ಒಪ್ಪಿರುವ ಒಡಂಬಡಿಕೆ ಆಗಿದ್ದು.

## *ಮಕ್ಕಳ ಹಕ್ಕುಗಳು*

ಒಮ್ಮೆ ನಿಮ್ಮನ್ನು ನೀವೇ ಪ್ರಶ್ನಿಸಿಕೊಳ್ಳಿ - 'ನಾನು ಯಾರು ?' ಇದಕ್ಕೆ ಉತ್ತರಗಳು ಅನೇಕ. 'ನಾನು ಇಂಥವನು/ಇಂಥವಳು. ನನ್ನದು ಇಂಥ ಊರು-ಕೇರಿ, ಇಂಥವರ ಮಗ/ಮಗಳು ನಾನು, ಇಂಥವರ ಪತ್ನಿ/ಪತಿ...' ಹೀಗೆ ಸೇರಿಸುತ್ತಾ ಹೋಗಬಹುದು. ಒಮ್ಮೆ ಸಭೆಯೊಂದರಲ್ಲಿ ಇದೇ ಪ್ರಶ್ನೆಯನ್ನು ಎತ್ತಿದಾಗ ಬಂದ ಉತ್ತರ ಹೀಗಿತ್ತು - 'ನಾನು ಒಬ್ಬ ಮನುಷ್ಯಜೀವಿ. ಈ ಜಗತ್ತಿನ ಈ ದೇಶದ ಇಂಥ ರಾಜ್ಯದ ಇಂಥ ಊರಿನಲ್ಲಿದ್ದೇನೆ. ಇಂಥವರು ನನ್ನ ತಂದೆ-ತಾಯಿ. ನಾನು ಜನ್ಮ ತಳೆದು 17 ವರ್ಷಗಳಾಗಿವೆ. ನಾನು ಮೊದಲು ಮಗುವಾಗಿ, ಬೆಳೆದು...' ಆತನ ಉತ್ತರ ಆರಂಭವಾದುದು ಹಾಸ್ಯದ ಧಾಟಿಯಲ್ಲಿ. ಬರುಬರುತ್ತಾ ಅದು ಗಟ್ಟಿಯಾಗಿ, ಗಂಭೀರವಾಗಿ, ವಿಚಾರಪ್ರಚೋದಕವಾಗಿ ಬೆಳೆಯಿತು. 'ನಾನು ಮಗುವಾಗಿದ್ದೆ. ಅದರ ಸುಖವನ್ನುಂಡು ಬೆಳೆದು ಈಗ ವಯಸ್ಕನಾಗಿ ಕಲಿಯುತ್ತಿದ್ದೇನೆ, ಮುಂದೆ ಇನ್ನೂ ದೊಡ್ಡವನಾಗುತ್ತೇನೆ, ಅನುಭವಗಳನ್ನು ಮೈಗೂಡಿಸಿಕೊಳ್ಳುತ್ತಾ ಕಷ್ಟ-ಸುಖ ತಿಳಿಯುತ್ತಾ...'

ಇಲ್ಲಿ ಪ್ರಮುಖವಾಗಿ ಕಾಣುವುದು - 'ನಾನು ಮೊದಲು ಮಗುವಾಗಿದ್ದೆ.' ನಾವೆಲ್ಲರೂ ಮಗುವಾಗಿದ್ದವರೇ.

**ಮಕ್ಕಳೆಂದ ಕೂಡಲೇ ನಿಮಗೆ ಏನನ್ನಿಸುತ್ತದೆ ?**

# ಮಕ್ಕಳೆಂದರೆ...!

**ಮ**ಕ್ಕಳೆಂದರೆ... ಏನೂ ತಿಳಿಯದ ಮುಗ್ಧರು...ತಂದೆ-ತಾಯಿಯರ ರಕ್ಷಣೆಯಲ್ಲಿ ಇರಬೇಕಾದವರು. ಖುಷಿಯಾಗಿ ಆಡುವವರು... ಕುತೂಹಲಿಗಳು, ಒಂದು ಕಡೆ ಕೂರದ ಉತ್ಸಾಹದ ಚಿಲುಮೆಗಳು... ಹೂವಿನಂತಹವರು, ಮೃದುವಾದ ಭಾವನೆಗಳನ್ನು ಹೊಂದಿರುವವರು... ದೊಡ್ಡವರ ಅಂಕೆಯಲ್ಲಿ ಬೆಳೆಯಬೇಕಾದವರು... 12 ಅಥವಾ 14 ವರ್ಷದ ಒಳಗಿನ ಪ್ರಜೆಗಳು...

'ಮಕ್ಕಳೆಂದರೆ ದೇವರ ಸಮಾನ... ಅವರೇ ನಾಳಿನ ಭವಿಷ್ಯ... ಇಂದಿನ ಮಕ್ಕಳೇ ನಾಳಿನ ಪ್ರಜೆಗಳು' ಇತ್ಯಾದಿ.

## ನಿಮ್ಮ ಮಕ್ಕಳು ಹೇಗಿದ್ದಾರೆ?

ಸಾಮಾನ್ಯವಾಗಿ ಬರುವ ಪ್ರತಿಕ್ರಿಯೆಗಳು, 'ಓಹೋ ಚೆನ್ನಾಗಿದ್ದಾರೆ, ಅವರಿಗೇನಾಗಿದೆ ? ಬೆಳಗಾಗಿ ಎದ್ದು ಹಲ್ಲುಜ್ಜಿ ಮುಖ ತೊಳೆದು, ತಿಂಡಿ ತಿಂದು, ಶಾಲೆಗೆ ಹೋಗಿ ಕಲಿಯುತ್ತಾರೆ, ಆಡುತ್ತಾರೆ, ಹಾಡುತ್ತಾರೆ. ಗೆಳೆಯರೊಡನೆ ನಲಿದು ಮನೆಗೆ ಬಂದು ನಮ್ಮೊಡನೆ ಎಲ್ಲವನ್ನೂ ಹಂಚಿಕೊಳ್ಳುತ್ತಾರೆ. ರಾತ್ರಿ ಊಟವಾದ ಮೇಲೆ ಕತೆ ಕೇಳುತ್ತಾ ಅಪ್ಪ-ಅಮ್ಮನ ಆಸರೆಯಲ್ಲಿ ಹಾಯಾಗಿ ಮಲಗುತ್ತಾರೆ, ಕನಸು ಕಾಣುತ್ತಾರೆ...'

ಎಲ್ಲ ಮಕ್ಕಳ ಕುರಿತು ಹೀಗೆ ಹೇಳಬಹುದೆ ? ಇಲ್ಲ. ಶಾಲೆ, ಮನೆ, ಕುಟುಂಬ ಇಂತಹದೆಲ್ಲವೂ ಇದ್ದೂ ಏನೂ ಇಲ್ಲದ ಮಕ್ಕಳು; ಸಂಬಂಧಿಗಳು, ಪ್ರೀತಿ-ಪ್ರೇಮ, ರಕ್ಷಣೆಯ ಬಗ್ಗೆ ಅರಿವೇ ಇಲ್ಲದ ಎಷ್ಟೋ ಮಕ್ಕಳಿದ್ದಾರೆ. ನಾಳೆ ಎಂದರೆ ಹೇಗಿದ್ದೀತು, ಏನಾದೀತು ಎಂಬುದರ ಕಲ್ಪನೆಯೇ ಇಲ್ಲದ, ಸದಾ ಭಯದ ನೆರಳಲ್ಲೇ ಬದುಕುವ ಮಕ್ಕಳಿದ್ದಾರೆ.

ಈಗ ಮತ್ತೊಮ್ಮೆ ಸ್ವಲ್ಪ ಬಿಡಿಸಿ ನೋಡೋಣ 'ನಮ್ಮವೇ ಮಕ್ಕಳು ಹೇಗಿದ್ದಾರೆ ?'

ಸಾಮಾನ್ಯ ಪರಿಸರದಲ್ಲಿ ಸುಖವಾಗಿ ಬೆಳೆಯುತ್ತಿರುವ ಮಕ್ಕಳ ನಡುವೆ ಲಕ್ಷ ಲಕ್ಷ ಮಕ್ಕಳು ಹೀನಾಯ ಬದುಕನ್ನು ಸವೆಸುತ್ತಿದ್ದಾರೆ.

ತಾಯ ಗರ್ಭದಲ್ಲಿರುವಾಗಲೇ ಸರಿಯಾದ ಆರೈಕೆ ಕಾಣದೆ ಗರ್ಭದಲ್ಲೇ ಒಣಗುವ ಮಕ್ಕಳು, ಹುಟ್ಟಿದಾಗ ಸರಿಯಾದ



*ಮಕ್ಕಳನ್ನು ಕುರಿತು 90ರ ದಶಕದಲ್ಲಿ ಕೇಳಿಬರುತ್ತಿದ್ದ ಮಾಹಿತಿ*

## ಆರೋಗ್ಯ



- ಭಾರತದಲ್ಲಿ ಹುಟ್ಟಿದ ಪ್ರತಿ 1000 ಶಿಶುಗಳಲ್ಲಿ ಒಂದು ವರ್ಷ ತುಂಬುವುದರೊಳಗೆ 79 ಮಕ್ಕಳು ಮತ್ತು ಐದು ವರ್ಷ ತುಂಬುವುದರೊಳಗೆ 124 ಮಕ್ಕಳು ಅಸುನೀಗುತ್ತವೆ.
- 6 ವರ್ಷದೊಳಗಿನ ಶೇ. 56 ಮಕ್ಕಳಿಗೆ ಕಬ್ಬಿಣಾಂಶದ ಕೊರತೆ.
- 22 ಲಕ್ಷ ಮಕ್ಕಳು ಮಿದುಳು ಸಂಬಂಧಿತ ಕ್ರೆಟಿನಿಸಂ ರೋಗದಿಂದ ನರಳುತ್ತಿದ್ದಾರೆ.
- 66 ಲಕ್ಷ ಮಕ್ಕಳು ಭಾಗಶಃ ಬುದ್ಧಿಮಾಂದ್ಯರು.
- ಕರ್ನಾಟಕದಲ್ಲಿ ಹುಟ್ಟಿದ ಪ್ರತಿ 1000 ಶಿಶುಗಳಲ್ಲಿ ಒಂದು ವರ್ಷ ತುಂಬುವುದರಲ್ಲಿ 73 ಮಕ್ಕಳು, ಐದು ವರ್ಷ ತುಂಬುವುದರಲ್ಲಿ 21 ಮಕ್ಕಳು ಮರಣ ಹೊಂದುತ್ತವೆ.

## ಹೆಣ್ಣು ಮಕ್ಕಳ ಸ್ಥಾನಮಾನ



- ಭಾರತದಲ್ಲಿ ಈಗ ಮಕ್ಕಳ ಸಂಖ್ಯೆ 30 ಕೋಟಿ ದಾಟಿದೆ. ಈ ಪೈಕಿ 3-6 ವರ್ಷದ ಮಕ್ಕಳು 15 ಕೋಟಿ;
- ಹೆಣ್ಣುಮಕ್ಕಳು 7 ಕೋಟಿ 30 ಲಕ್ಷ; ಗಂಡು ಮಕ್ಕಳು 7 ಕೋಟಿ 70 ಲಕ್ಷ.
- ಭ್ರೂಣಹತ್ಯೆ, ಪೌಷ್ಟಿಕ ಆಹಾರದ ಕೊರತೆ, ಸೂಕ್ತ ಚಿಕಿತ್ಸೆಯ ಅಭಾವ ಹೀಗೆ ಹಲವಾರು ರೀತಿಯಲ್ಲಿ 40 ಲಕ್ಷ ಹೆಣ್ಣುಮಕ್ಕಳು ಸಾಯುತ್ತಾರೆ.
- ಆರೋಗ್ಯ, ಶಿಕ್ಷಣ, ಅವಕಾಶ ಈ ಎಲ್ಲದರಲ್ಲೂ ಹೆಣ್ಣುಮಕ್ಕಳಿಗೆ ಕಡೆಯ ಸ್ಥಾನ.

## ಪ್ರಾಥಮಿಕ ಶಿಕ್ಷಣ



- ಭಾರತದಲ್ಲಿ ಅ-ಆ-ಇ-ಈ ಕೂಡ ತಿಳಿಯದ ಮಕ್ಕಳ ಸಂಖ್ಯೆ 2 ಕೋಟಿ ದಾಟಿದೆ.
- ವಾರ್ಷಿಕ ಬಜೆಟ್‌ನಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ಕನಿಷ್ಠ ಪ್ರಾಮುಖ್ಯತೆ.
- ಶಾಲೆಯೇ ಇಲ್ಲದ ಹಳ್ಳಿಗಳು. ಶಿಕ್ಷಕರೇ ಇಲ್ಲದ ಶಾಲೆಗಳು.
- ಒಂದನೆ ತರಗತಿಗೆ ಸೇರುವ ಪ್ರತಿ 100 ಮಕ್ಕಳಲ್ಲಿ 52 ಮಕ್ಕಳು ಮಾತ್ರ 5ನೇ ತರಗತಿಯವರೆಗೆ ಬರುತ್ತಾರೆ.
- ಕರ್ನಾಟಕದಲ್ಲಿ ಶಾಲೆಗೆ ದಾಖಲಾದ ಮಕ್ಕಳಲ್ಲಿ 100ಕ್ಕೆ 45 ಮಕ್ಕಳು ಶಾಲೆಗೆ ಹಾಜರಾಗುವುದೇ ಇಲ್ಲ. 4ನೇ ತರಗತಿ ದಾಟುವ ಹೊತ್ತಿಗೆ 30 ಮಕ್ಕಳು ಶಾಲೆ ತೊರೆಯುತ್ತಾರೆ.

## ಬಾಲಕಾರ್ಮಿಕ ಪದ್ಧತಿ

- ಭಾರತದಲ್ಲಿ 11 ಕೋಟಿ ಬಾಲಕಾರ್ಮಿಕರಿದ್ದಾರೆ !
- ಇವರಿಗೆ ದುಡಿತ ಹೆಚ್ಚು, ಕೂಲಿ ಕಡಿಮೆ. ಯಾವುದಾದರೂ ಕೌಶಲ್ಯದಲ್ಲಿ ಪ್ರಾವೀಣ್ಯತೆ ಪಡೆಯದಿದ್ದರೆ ಬೆಳೆದಂತೆಲ್ಲಾ ಕೆಲಸಕ್ಕೆ ಬಾರದವರಾಗುತ್ತಾರೆ.
- ವರ್ಷದಿಂದ ವರ್ಷಕ್ಕೆ ನಿರುದ್ಯೋಗದ ಹೆಚ್ಚಳ.
- ಜೀತಕ್ಕೆ, ಸೂಳೆಗಾರಿಕೆಗೆ ತಳ್ಳಲ್ಪಡುವ, ಭವಿಷ್ಯ ಶೂನ್ಯವಾದ ಮಕ್ಕಳು.

### ಬಾಲಕಾರ್ಮಿಕರು ಎಷ್ಟು?

| | ಸರ್ಕಾರಿ ಅಂಕಿ-ಅಂಶ | ಸಿ.ಎ.ಸಿ.ಎಲ್★ ಅಂಕಿ-ಅಂಶ |
|---|---|---|
| ಭಾರತದಲ್ಲಿ | 112.85 ಲಕ್ಷ | 1110.00ಲಕ್ಷ |
| ಕರ್ನಾಟಕದಲ್ಲಿ | 9.76 ಲಕ್ಷ | 34.00 ಲಕ್ಷ |



★ ಬಾಲಕಾರ್ಮಿಕ ಪದ್ಧತಿ ವಿರೋಧಿ ಆಂದೋಲನ

ವ್ಯವಸ್ಥೆ ಇಲ್ಲದೆ ನಿರ್ಲಕ್ಷ್ಯದಿಂದ ಸಾಯುವ, ಅಂಗವಿಕಲರಾಗುವ ಮಕ್ಕಳು, ತಂದೆ-ತಾಯಿಯರಿಗೆ ಬೇಡವಾದ ಅನಾಥರು, ಪೋಷಣೆ ಆಹಾರ, ಔಷಧಿ, ರೋಗ ನಿರೋಧಕ ಚುಚ್ಚುಮದ್ದುಗಳು ದೊರಕದೆ ಮಾನಸಿಕ/ದೈಹಿಕ ಬೆಳವಣಿಗೆ ಕುಂಠಿತವಾಗಿ ವಿಕಲಾಂಗರಾಗುವ ಮಕ್ಕಳು...

ಯಾರದೋ ಸುಖಕ್ಕಾಗಿ ಗಾಣದೆತ್ತಿನಂತೆ ದುಡಿಯುವ, ನಾಯಿಗಳಂತೆ ಕಸದ ಕುಪ್ಪೆಗಳನ್ನು ಕೆದಕಿ ಚಿಂದಿ ಆಯುವ, ನೆಲೆಯಿಲ್ಲದೆ ಅಲೆಯುವ, ದಬ್ಬಾಳಿಕೆಯಡಿ ಒತ್ತಡದಲ್ಲಿ ಕಷ್ಟಪರಿಸ್ಥಿತಿಗಳಲ್ಲಿ ಸತ್ತಂತೆ ಬದುಕುವ, ಕಾಮುಕರ ಬರ್ಬರಕೃತ್ಯಗಳಿಗೆ ಬಲಿಪಶುಗಳಾಗುವ, ಭಯದ ನೆರಳಲ್ಲಿ ಸಿಲುಕಿ ಹಿಡಿಯಾದ, ಹಿಂಡಿ ಹಿಪ್ಪೆಯಾದ ಮಕ್ಕಳು...

ಯೋಗ್ಯವಾದುದನ್ನು ತಿಳಿಯುವ, ಕಲಿಯುವ ಅವಕಾಶವೇ ಇಲ್ಲದೆ, ಮನೋರಂಜನೆ, ಬಿಡುವು, ಭವಿಷ್ಯದಲ್ಲಿ ಭದ್ರತೆ ಕಾಣದೆ, ತಾನೂ ಪ್ರಜೆಯಾಗಿ ಬೆಳೆಯುವ ಅವಕಾಶವೇ ದೊರೆಯದ ಮಕ್ಕಳು...

ತಮ್ಮ ಮಾತಿಗೂ ಅರ್ಥವಿದೆ, ಬೆಲೆಯಿದೆ, ಸುತ್ತಮುತ್ತಲಿನ ವಿಚಾರಗಳನ್ನು ತಿಳಿದುಕೊಳ್ಳುವುದರ ಅವಶ್ಯಕತೆಯಿದೆ, ತಾವೂ ಚಿಂತಿಸಬಹುದು, ಬುದ್ಧಿ ಬೆಳೆಸಿಕೊಳ್ಳಬಹುದು, ಹಿರಿದಾದುದರ ಬಗ್ಗೆ ಯೋಚಿಸಬಹುದು, ಸಂಘಟಿತರಾಗಿ ತಾವೂ ನಿಲ್ಲಬಹುದು ಎಂಬುದರ ಕಲ್ಪನೆಯೇ ಇಲ್ಲದ ಮಕ್ಕಳು...

ಇವರೆಲ್ಲ ಬೇರೆಲ್ಲೋ ಅಲ್ಲ, ನಮ್ಮ ಸುತ್ತಮುತ್ತಲೇ ಇದ್ದಾರೆ, ನಾವು ಕಣ್ಣಿದ್ದೂ ಕಾಣುತ್ತಿಲ್ಲ ಅಷ್ಟೆ.

ಈಗ ಹೇಳಿ, ಕತ್ತಲಲ್ಲೇ ಉಳಿದು ಕಪ್ಪಾಗಿ ಹೋಗುತ್ತಿರುವ ಈ ಮಕ್ಕಳು ಹಿಂದು ಮುಂದಿನ ತಿಳಿವೇ ಇಲ್ಲದಂತೆ ಬೆಳಕೇ ಕಾಣದಂತೆ ಹೀಗೆಯೇ ಬದುಕಬೇಕೆ ?

ಇಂತಹ ಮಕ್ಕಳ ಬದುಕು ಹಸನಾಗಬೇಕಾದರೆ ಏನು ಮಾಡಬೇಕು? ನಿಮ್ಮೆದೆಯ ಮಾನವೀಯತೆಯ ನೆಲೆಯಲ್ಲಿ ಉತ್ತರ ಸಿಗದೆ ಇಲ್ಲ. ಇದನ್ನೊಂದು ಅಭ್ಯಾಸವೆಂದು ಪರಿಗಣಿಸಿ ಒಂದು ಕಡೆ ಬರೆದಿಡಿ.



# ಮಕ್ಕಳಿಗೆ ಬೇಕು ಆಹಾರ, ಶಿಕ್ಷಣ... ಸ್ವಾತಂತ್ರ್ಯ

ಮಕ್ಕಳಿಗೆ ಬೇಕು ಪೌಷ್ಟಿಕ ಆಹಾರ, ಕೌಟುಂಬಿಕ ವಾತಾವರಣ ಮತ್ತು ರಕ್ಷಣೆ; ಬೇಕು ವಾಸಯೋಗ್ಯ ಮನೆ, ಉತ್ತಮ ಆರೋಗ್ಯಸೇವೆ, ಕಲಿಸುವ ಶಾಲೆ; ತಿಳಿಯುವ, ನೋಡುವ, ಪ್ರಶ್ನಿಸುವ, ಅವಕಾಶ; ಬೆರೆಯುವ, ಜೊತೆಗೂಡುವ ಸ್ವಾತಂತ್ರ್ಯ......

ಈ ಎಲ್ಲವೂ ಎಲ್ಲಾ ಮಕ್ಕಳಿಗೂ ದೊರಕಬೇಕೆಂಬುದೇ ಅಪೇಕ್ಷೆ. ಮೇಲಿನ ಎಲ್ಲ ಹೇಳಿಕೆಗಳು ಬರಿಯ ಮಾತಾಗಿ ಉಳಿಯಬಾರದೆಂದೆ ಅವುಗಳಿಗೆ ವಿಧಿ-ವಿಧಾನದ ಚೌಕಟ್ಟು ಹಾಕಿ ಜಗತ್ತಿನ ಬಹುತೇಕ ದೇಶಗಳು ಒಪ್ಪಿರುವ ಒಡಂಬಡಿಕೆಗಳಾಗಿವೆ. ಅವುಗಳನ್ನು **ಮಕ್ಕಳ ಹಕ್ಕುಗಳು** ಎಂದು ಕರೆಯಲಾಗಿದೆ. ಯಾವುದನ್ನಾದರೂ 'ಹಕ್ಕು' ಎಂದು ಕರೆದರೆ ಅದಕ್ಕೆ ಸಾರ್ವತ್ರಿಕ ಒಪ್ಪಿಗೆ, ಮನ್ನಣೆ ಬಂದಾಗ ಅಂತಹ ಹಕ್ಕುಗಳನ್ನು ಜಾರಿ ಮಾಡುವ ಮತ್ತು ಅಂತಹ ಹಕ್ಕುಗಳು ಆಯಾ ಸಂಬಂಧಪಟ್ಟ ಗುಂಪುಗಳಿಗೆ ತಲುಪುವಂತೆ ಮಾಡುವ ಜವಾಬ್ದಾರಿ ಆಯಾ ಸರ್ಕಾರದ್ದಾಗುತ್ತದೆ. ಹೀಗೆ ಒಪ್ಪಿಕೊಂಡ 'ಮಕ್ಕಳ ಹಕ್ಕುಗಳು' ಜಾರಿಗೆ ಬಂದು ಹತ್ತು ವರ್ಷಗಳಾಗಿವೆ (1989).

## ಹಿನ್ನೆಲೆ

ಮನುಷ್ಯಜೀವಿ ತನ್ನ ಮಕ್ಕಳು ಮರಿಗಳಿಗೆ ವಿಶೇಷವಾದ ಕಾಳಜಿ ಪ್ರೀತಿ ಪ್ರೇಮ ಮತ್ತು ರಕ್ಷಣೆ ನೀಡುವುದು ಸ್ವಾಭಾವಿಕ. ಪ್ರಾಣಿ ಪಕ್ಷಿ ಜಲಚರಗಳೂ ಇದಕ್ಕೆ ಹೊರತಲ್ಲ. ಒಂದು ಸಮುದಾಯ ತನ್ನ ಮಕ್ಕಳಿಗೆ ಬೇಕಾದ ಸೌಲಭ್ಯಗಳನ್ನು ನೀಡುವುದು ಸ್ವಾಭಾವಿಕ.

ಮಾನವ ಹಕ್ಕುಗಳ ಬಗ್ಗೆ ಚಿಂತನೆ ಆರಂಭವಾದದ್ದು 1789ರಲ್ಲಿ. ಫ್ರಾನ್ಸ್‌ನಲ್ಲಿ 'ನಾಗರೀಕ ಹಕ್ಕು' ಘೋಷಣೆ ಹೊರಬಂದ ಸಂದರ್ಭದಲ್ಲೂ ಮಕ್ಕಳನ್ನು ಪೋಷಕರ ಆಸ್ತಿ ಎಂದೇ ಪರಿಗಣಿಸಲಾಗಿತ್ತು. 20 ನೇ ಶತಮಾನದ ಆರಂಭದಲ್ಲೂ ಸಹ ಮಕ್ಕಳ ಬಗ್ಗೆ ಅಂತರಾಷ್ಟ್ರೀಯ ಮಟ್ಟದಲ್ಲಿ ಯಾವುದೇ ನಿಲುವುಗಳು ಇರಲಿಲ್ಲ. 'ಮಕ್ಕಳು ಅವರವರ ಕುಟುಂಬದ ಅಂಕೆಯಲ್ಲಿರಬೇಕು. ಕುಟುಂಬದ ನಿರ್ದೇಶನದಂತೆ ನಡೆಯಬೇಕು. ಮಕ್ಕಳ ಯೋಗಕ್ಷೇಮದ ಸಂಪೂರ್ಣ ಜವಾಬ್ದಾರಿ ಕುಟುಂಬದ್ದೇ'-ಇದು ಆಗಿದ್ದ ನಿಲುವು. ಇಂತಹ ನಿಲುವುಗಳ ಬದಲಾವಣೆಗೆ ಜಗತ್ತು ಮೊದಲನೆ ಜಾಗತಿಕ ಯುದ್ಧ (1914-18)ವಾಗುವ ತನಕ ಕಾಯಬೇಕಾಯಿತು.

'ಸೇವ್ ದ ಚಿಲ್ಡ್ರನ್' (SCF) ಸಂಸ್ಥೆ 1919ರಲ್ಲಿ ಬ್ರಿಟನ್ ಮತ್ತು ಸ್ವೀಡನ್‌ನಲ್ಲಿ ಆರಂಭವಾಯಿತು. ಈ ಎರಡು ದೇಶಗಳಲ್ಲಿರುವ SCFಶಾಖೆಗಳ ಒಕ್ಕೂಟದ ಒತ್ತಾಸೆಯಿಂದ 'ಮಕ್ಕಳ ಹಕ್ಕುಗಳ ಸನ್ನದು' (Chapter of the Rights of the Child) ರಚಿತವಾಯಿತು. ಅಂದಿನ ರಾಷ್ಟ್ರಗಳ ಒಕ್ಕೂಟ (League of Nations) 26 ಸೆಪ್ಟೆಂಬರ್ 1924ರಂದು ಈ ಸನ್ನದನ್ನು ಒಪ್ಪಿಕೊಂಡಿತು.

**ಅದರಲ್ಲಿ ಐದು ಪ್ರಮುಖ ವಿಚಾರಗಳಿದ್ದವು :**

1. ಪ್ರತಿ ಮಗುವಿಗೆ ದೈಹಿಕ ಹಾಗೂ ಆಧ್ಯಾತ್ಮಿಕ ಬೆಳವಣಿಗೆಗೆ ಅವಕಾಶವಿರಬೇಕು.
2. ಹಸಿವಿನಿಂದ ಬಳಲುವ ಮಗುವಿಗೆ ಆಹಾರ, ಅನಾರೋಗ್ಯಗೊಂಡ ಮಗುವಿಗೆ ಚಿಕಿತ್ಸೆ, ಹಿಂದುಳಿದ ಮಗುವಿಗೆ ಸಹಾಯ ನೀಡಬೇಕು. ಬಾಲಾಪರಾಧಿಗಳನ್ನು ಸನ್ಮಾರ್ಗಕ್ಕೆ ತರಬೇಕು, ತಿರಸ್ಕೃತ ಅಥವಾ ಅನಾಥ ಮಕ್ಕಳಿಗೆ ರಕ್ಷಣೆ ನೀಡಬೇಕು.
3. ನೈಸರ್ಗಿಕ ದುರಂತಗಳು ಅಥವಾ ಯುದ್ಧ ಸಂಭವಿಸಿದಾಗ ಎಲ್ಲಕ್ಕಿಂತ ಮೊದಲು ಮಕ್ಕಳಿಗೆ ರಕ್ಷಣೆ ನೀಡಬೇಕು.
4. ಮಕ್ಕಳನ್ನು ಎಲ್ಲ ರೀತಿಯ ಶೋಷಣೆಗಳಿಂದ ರಕ್ಷಿಸಬೇಕು, ಎಲ್ಲ ಮಕ್ಕಳಿಗೂ ರಕ್ಷಣೆ ದೊರಕಬೇಕು. ಎಲ್ಲ ಮಕ್ಕಳಿಗೂ ಶಿಕ್ಷಣ ದೊರಕಬೇಕು.
5. ಪ್ರತಿಯೊಂದು ಮಗುವೂ ತನ್ನ ಬುದ್ಧಿಶಕ್ತಿ, ಕೌಶಲ್ಯಗಳನ್ನು ತನ್ನ ಸಹವರ್ತಿಗಳ ಶ್ರೇಯೋಭಿವೃದ್ಧಿಗಾಗಿ ಬಳಸಬೇಕೆಂಬ ಪ್ರಜ್ಞೆಯೊಡನೆ ಬೆಳೆಯಬೇಕು.

1948ರಲ್ಲಿ ಘೋಷಿತವಾದ 'ಮಾನವ ಹಕ್ಕುಗಳಲ್ಲಿ' ಮಕ್ಕಳಿಗೂ ಹಕ್ಕುಗಳಿವೆ ಎಂದು ಗುರುತಿಸಲಾಯಿತು. 1959 ರ ನವೆಂಬರ್ 20ರಂದು ವಿಶ್ವಸಂಸ್ಥೆಯ ಮಹಾಸಭೆ ಮಕ್ಕಳ ಹಕ್ಕುಗಳನ್ನು ಅಂಗೀಕರಿಸಿತು. 'ಪ್ರತಿಯೊಂದು ಮಗುವಿಗೂ ಅತ್ಯುತ್ತಮವಾದುದನ್ನು ಕೊಡಬೇಕಾದುದು ಮನುಕುಲದ ಕರ್ತವ್ಯ' ಇದೇ ಅದರಲ್ಲಿ ಎತ್ತಿ ಹಿಡಿದಿರುವ ಪ್ರಮುಖ ಅಂಶ.

1924ರಲ್ಲಿ ಅಂದರೆ ಆರು ದಶಕಗಳಿಗೂ ಹಿಂದೆಯೇ ನೀಡಲಾಗಿದ್ದ ಐದು ಅಂಶಗಳನ್ನು ಇಲ್ಲಿ ವಿಶದೀಕರಿಸಲಾಗಿದೆ. ಅವುಗಳಲ್ಲಿ ಪ್ರಮುಖವಾದುದು -

- ಯಾವುದೇ ಮಗು ತಾರತಮ್ಯಕ್ಕೆ ಈಡಾಗಬಾರದು.
- ಗೌರವಯುತ ಬಾಳು ಮಕ್ಕಳಿಗೆ ಸಿಗಬೇಕು.
- ಸ್ವತಂತ್ರವಾಗಿ ವಿಕಾಸ ಹೊಂದುವ ಅವಕಾಶ ಮಕ್ಕಳಿಗಿರಬೇಕು.
- ಒಂದು ಹೆಸರು ಮತ್ತು ರಾಷ್ಟ್ರೀಯತೆ ಮಕ್ಕಳಿಗೆ ಬೇಕು.
- ಮಕ್ಕಳಿಗೆ ಸಾಮಾಜಿಕ ಭದ್ರತೆ ದೊರಕಬೇಕು.
- ಪ್ರೀತಿ ತೋರುವ ಮತ್ತು ಅರ್ಥಮಾಡಿಕೊಳ್ಳುವ ಹತ್ತಿರದವರು ಮಕ್ಕಳಿಗೆ ಇರಬೇಕು.
- ಶಿಕ್ಷಣ, ಮನೋರಂಜನೆ ಮಕ್ಕಳಿಗೆ ಸಿಗಬೇಕು.
- ದುರಂತ ಸಂಭವಿಸಿದಲ್ಲಿ ಆದ್ಯತೆಯ ಮೇಲೆ ರಕ್ಷಣೆ ಮತ್ತು ಪುನರ್ವಸತಿ ಮಕ್ಕಳಿಗೆ ಸಿಗಬೇಕು.
- ನಿರ್ಲಕ್ಷ್ಯ, ಹಿಂಸೆ ಅಥವಾ ಶೋಷಣೆಯ ವಿರುದ್ಧ ರಕ್ಷಣೆ ಮಕ್ಕಳಿಗೆ ಸಿಗಬೇಕು.



ಇವೆಲ್ಲವನ್ನೂ ವಿಶ್ವಸಂಸ್ಥೆಯ ಸದಸ್ಯ ರಾಷ್ಟ್ರಗಳು ಒಪ್ಪಿ ಜಾರಿಗೆ ತರಬೇಕೆಂದು ಬಯಸಲಾಗಿತ್ತೇ ಹೊರತು 'ಇವುಗಳನ್ನು ಜಾರಿಗೆ ತರಲು ತಪ್ಪಕೂಡದು. ಎಂಬ ಒತ್ತಾಯಪೂರ್ವಕ ಆಗ್ರಹ' ಇರಲಿಲ್ಲ. ಈ ಹಿನ್ನೆಲೆಯಲ್ಲಿ ಬಂದ 'ಒಡಂಬಡಿಕೆ' ಒಂದು ರೀತಿಯ ದೃಢವಾದ ಕಾನೂನು. ಒಡಂಬಡಿಕೆಯನ್ನು ಒಪ್ಪಿ ಅನುಸರಿಸುವ ರಾಷ್ಟ್ರಗಳ ಜವಾಬ್ದಾರಿ, ಮಿತಿಗಳು ಮತ್ತು ಜಾರಿ ಮಾಡದಿದ್ದಲ್ಲಿ ತೆಗೆದುಕೊಳ್ಳಬೇಕಾದ ಕ್ರಮಗಳ ಬಗ್ಗೆ ಅದರಲ್ಲಿ ಅಡಕಮಾಡಿರುವುದು ಒಡಂಬಡಿಕೆಯ ಸ್ವರೂಪ. ಮುಂದೆ 1989ರಲ್ಲಿ ವಿಶ್ವಸಂಸ್ಥೆ ಅಂಗೀಕರಿಸಿ ಘೋಷಿಸಿದ 'ಮಕ್ಕಳ ಹಕ್ಕುಗಳ ಒಡಂಬಡಿಕೆ'ಯಲ್ಲಿ ಇವೆಲ್ಲ ಇದೆ. ವಯಸ್ಕರಿಗಾಗಿರುವ ಕಾನೂನು, ಹಕ್ಕುಗಳಿಗಿಂತ ಇನ್ನೂ ಉತ್ತಮವಾದ ಆದರ್ಶಗಳು ಮತ್ತು ವ್ಯವಸ್ಥೆಗಳು ಇರಬೇಕೆಂದು ಅದು ಬಯಸಿದೆ.



# ಬದುಕು, ರಕ್ಷಣೆ, ವಿಕಾಸ, ಭಾಗವಹಿಸುವ ಹಕ್ಕು

ಮಕ್ಕಳ ಹಕ್ಕುಗಳ ಒಡಂಬಡಿಕೆ (Convention on the Rights of the Child)ಯಲ್ಲಿ ಪ್ರಮುಖವಾಗಿ ಕಂಡುಬರುವುದು 'ಯೂನಿಸೆಫ್ ಹೇಳುವಂತೆ ನಾಲ್ಕು ಮೂಲ ಹಕ್ಕುಗಳು.



**1. ಬದುಕುವ ಹಕ್ಕು**

'ಪ್ರತಿಯೊಂದು ಮಗುವಿಗೂ ಜನ್ಮ ಹೊಂದುವ, ಜೀವಿಸುವ, ಉತ್ತಮ ಆರೋಗ್ಯಸೇವೆ, ಪೌಷ್ಟಿಕ ಆಹಾರ ಪಡೆಯುವ, ಒಂದು ಹೆಸರು ಹೊಂದಿರುವ, ತಾನು ಒಂದು ದೇಶದ ಪ್ರಜೆ ಎಂದು ಗುರುತಿಸಿಕೊಳ್ಳುವ ಹಕ್ಕು.'

**2. ರಕ್ಷಣೆಯ ಹಕ್ಕು**

'ದಬ್ಬಾಳಿಕೆ, ತೊಂದರೆ, ಕಿರುಕುಳ, ಹಿಂಸೆಗಳ ವಿರುದ್ಧ ತುರ್ತು ಸಂದರ್ಭಗಳಲ್ಲಿ ಮತ್ತು ಸಶಸ್ತ್ರ ಘರ್ಷಣೆಗಳಾದಾಗ ರಕ್ಷಣೆ'.





**3. ವಿಕಾಸ ಹೊಂದುವ ಹಕ್ಕು**

'ಶಿಕ್ಷಣ, ಶೈಶವದಲ್ಲಿ ಬೆಳೆಯಲು ಅವಕಾಶ, ಆರೋಗ್ಯ ರಕ್ಷಣೆ, ಸಾಮಾಜಿಕ ಭದ್ರತೆ, ಬಿಡುವು, ಮನೋರಂಜನೆ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ಅವಕಾಶ.

**4. ಭಾಗವಹಿಸುವ ಹಕ್ಕು**

'ಮಕ್ಕಳ ಅಭಿಪ್ರಾಯಗಳಿಗೆ ಮನ್ನಣೆ, ಸ್ವಾತಂತ್ರ್ಯ, ಮಾಹಿತಿಯ ಲಭ್ಯತೆ, ಚಿಂತನೆಗೆ ಬುದ್ಧಿ ಬೆಳವಣಿಗೆಗೆ ಅವಕಾಶ, ಸಂಘಟಿತರಾಗಿರುವುದು ಮತ್ತು ಧಾರ್ಮಿಕ ಹಕ್ಕುಗಳು.'



ಈ ಎಲ್ಲ ವಿಚಾರಗಳನ್ನು ಒಳಗೊಂಡ ಮಕ್ಕಳ ಹಕ್ಕುಗಳ ಒಡಂಬಡಿಕೆಯಲ್ಲಿ 54 ಪರಿಚ್ಛೇದಗಳಿವೆ. ಮಕ್ಕಳನ್ನು ಕುರಿತಾದ ಎಲ್ಲ ಕಾಳಜಿಗಳನ್ನು ಒತ್ತಿ ಹೇಳುವ ಈ ದಾಖಲೆ ರೂಪುಗೊಳ್ಳಲು ಆರಂಭವಾದುದು 1978ರಲ್ಲಿ.

1924ರಲ್ಲೂ ಮತ್ತು 1959ರಲ್ಲೂ ವ್ಯಕ್ತಗೊಂಡ ಮಕ್ಕಳ ಹಕ್ಕುಗಳ ಸ್ವರೂಪದಲ್ಲಿ ಇರಬೇಕಾದ ಬಿಗಿ ಇರಲಿಲ್ಲ. ಇದನ್ನು ಮನಗಂಡ ಕೆಲವರು ಅಂತಾರಾಷ್ಟ್ರೀಯ ಮಟ್ಟದಲ್ಲಿ ಸರ್ವರಿಗೂ ಒಪ್ಪಿಗೆಯಾಗುವಂತಹ ಚೌಕಟ್ಟುಗಳನ್ನು ನಿರ್ಮಿಸಬೇಕೆಂದು ಹೇಳುತ್ತಾ ಬಂದಿದ್ದರು. ಮಕ್ಕಳನ್ನು ಕುರಿತಾದ ಮತ್ತು ಮಕ್ಕಳ ವಿಚಾರಗಳಿಗೆ ಮಾತ್ರ ಮೀಸಲಾದ, ಹಿಂದಿನ, ಈಗಿನ ಹಾಗೂ ಮುಂದೆ ಬರಬಹುದಾದ ಪರಿಸ್ಥಿತಿಗಳನ್ನು ಊಹಿಸಿಕೊಂಡು, ಸರ್ವರಾಷ್ಟ್ರಗಳ ಕಾನೂನುಗಳಿಗೆ ಅನುಗುಣವಾಗಿ ಒತ್ತಾಸೆಯಾಗಿ ನಿಲ್ಲುವಂತಹ ಮಕ್ಕಳ ಹಕ್ಕುಗಳ ಒಡಂಬಡಿಕೆ ಆಗಬೇಕೆಂದು ಪೋಲೆಂಡ್ ಸರ್ಕಾರ 1978ರಲ್ಲಿ ವಿಶ್ವಸಂಸ್ಥೆಯನ್ನು ಕೋರಿತು.

ಅದರಂತೆ 1979 ರಲ್ಲಿ ಮಕ್ಕಳ ಹಕ್ಕುಗಳ ಒಡಂಬಡಿಕೆ ಲಿಖಿತಗೊಳ್ಳಲು ಆರಂಭವಾಯಿತು. (ಆ ವರ್ಷ ಅಂತಾರಾಷ್ಟ್ರೀಯ ಮಕ್ಕಳ ವರ್ಷ). ಇದಕ್ಕೆ ಆಧಾರವಾಗಿ ಇಟ್ಟುಕೊಂಡ ದಾಖಲೆಗಳೆಂದರೆ 1959ರ ಮಕ್ಕಳ ಹಕ್ಕುಗಳ ಘೋಷಣೆ; ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕು ಮತ್ತು ನಾಗರಿಕ ಹಾಗೂ ರಾಜಕೀಯ ಹಕ್ಕುಗಳನ್ನು ಕುರಿತಾದ ಅಂತಾರಾಷ್ಟ್ರೀಯ ಒಡಂಬಡಿಕೆ.

ಮಕ್ಕಳ ಹಕ್ಕುಗಳ ಒಡಂಬಡಿಕೆಯನ್ನು ಲಿಖಿತಗೊಳಿಸಿ ಸಿದ್ದಪಡಿಸುವ ಜವಾಬ್ದಾರಿ ಹೊತ್ತ ಸಮಿತಿಯಲ್ಲಿ ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಕುರಿತಾದ ಆಯೋಗದ 43 ಸದಸ್ಯ ರಾಷ್ಟ್ರಗಳ ಪ್ರತಿನಿಧಿಗಳು; ಯೂನಿಸೆಫ್, ಐ. ಎಲ್. ಒ. (ಅಂತಾರಾಷ್ಟ್ರೀಯ ಕಾರ್ಮಿಕ ಸಂಘಟನೆ), ನಿರಾಶ್ರಿತರನ್ನು ಕುರಿತು ಇರುವ ವಿಶ್ವಸಂಸ್ಥೆಯ ಉನ್ನತ ಸಮಿತಿ ಮತ್ತು ಸುಮಾರು 50 ಸ್ವಯಂಸೇವಾ ಸಂಸ್ಥೆಗಳ ಪ್ರತಿನಿಧಿಗಳಿದ್ದರು. ಇದರಲ್ಲಿ ಪ್ರಮುಖ ಪಾತ್ರ ವಹಿಸಿದ್ದು ಡಿಫೆನ್ಸ್ ಪಾರ್ ಚಿಲ್ಡ್ರನ್ ಇಂಟರ್‌ನ್ಯಾಷನಲ್ (ಡಿ.ಸಿ.ಐ) ರೆಡ್ಡಾಬಾರ್ನಾ, ಅಮ್ನೆಸ್ಟಿ ಇಂಟರ್‌ನ್ಯಾಷನಲ್ ಮತ್ತು ಇಂಟರ್‌ನ್ಯಾಷನಲ್ ಸೇವ್‌ದ ಚಿಲ್ಡ್ರನ್ ಅಲಯನ್ಸ್.

## 1989

ಒಡಂಬಡಿಕೆಯ ರಚನೆಯಲ್ಲಿ ನಿರತವಾಗಿದ್ದ ಸಮಿತಿ ಬರೆದು, ಹೊಡೆದು, ತಿದ್ದಿ, ವಿಮರ್ಶಿಸಿ, ಮತ್ತೆ ಬರೆದು, ಅಳೆದು ಸುರಿದು, ಹೇಳಿ ಕೇಳಿ ಒಡಂಬಡಿಕೆಯನ್ನು ಒಂದು ರೂಪಕ್ಕೆ ತರಲು ಹತ್ತು ವರ್ಷಗಳೇ ಹಿಡಿದವು. ಹೀಗೆ ಸಿದ್ಧವಾದದ್ದನ್ನು 1989ರಲ್ಲಿ ವಿಶ್ವಸಂಸ್ಥೆಯ ಸಾಮಾನ್ಯ ಸಭೆ ಅಂಗೀಕರಿಸಿತು. ಅಂಗೀಕೃತ ಒಡಂಬಡಿಕೆಯನ್ನು ಒಪ್ಪಿ ಸಹಿ ಮಾಡಲು 1990 ಜನವರಿ 29 ರಿಂದ ಜಗತ್ತಿನ ಎಲ್ಲ ರಾಷ್ಟ್ರಗಳನ್ನು ಆಹ್ವಾನಿಸಲಾಯ್ತು. ಪ್ರಾರಂಭಿಕ ಹಂತದಲ್ಲಿ 61 ರಾಷ್ಟ್ರಗಳು ತಾವು ಒಡಂಬಡಿಕೆ ಜಾರಿಗೊಳಿಸಲು ಸಿದ್ಧವೆಂದು ಘೋಷಿಸಿದವು. ಅಂತೂ 1990ರ ಸೆಪ್ಟೆಂಬರ್ 2ರಂದು ಮಕ್ಕಳ ಹಕ್ಕುಗಳ ಒಡಂಬಡಿಕೆ ಅಂತಾರಾಷ್ಟ್ರೀಯ ಕಾನೂನುಗಳ ಪಟ್ಟಿಗೆ ಸೇರ್ಪಡೆಯಾಯಿತು.

ಮಕ್ಕಳ ಹಕ್ಕುಗಳ ಒಡಂಬಡಿಕೆ ಜಗತ್ತಿನಾದ್ಯಂತ ಅತ್ಯಂತ ಹೆಚ್ಚಿನ ಸಂಖ್ಯೆಯ ರಾಷ್ಟ್ರಗಳು ಒಪ್ಪಿರುವ ಒಡಂಬಡಿಕೆ ಎಂಬ ಹೆಗ್ಗಳಿಕೆ ಗಳಿಸಿದೆ.

ಭಾರತ ಸರ್ಕಾರ ತಾನು ಬಾಲಕಾರ್ಮಿಕ ಪದ್ಧತಿಯನ್ನು ತಕ್ಷಣ ನಿರ್ಮೂಲನ ಮಾಡಲಾಗದು. ಇದಕ್ಕೆ ಕಾಲಾವಧಿ ಬೇಕೆಂದು ಷರತ್ತುಗಳನ್ನು ಹಾಕಿ 1992 ಡಿಸೆಂಬರ್ 11ರಂದು ಒಡಂಬಡಿಕೆಗೆ ಸಹಿ ಮಾಡಿತು.

## ಒಡಂಬಡಿಕೆ

ಮಕ್ಕಳ ಹಕ್ಕುಗಳ ಒಡಂಬಡಿಕೆಯಲ್ಲಿ ಮೂರು ಭಾಗಗಳಿವೆ. ಮೊದಲನೆ ಭಾಗದಲ್ಲಿ 41 ಪರಿಚ್ಛೇದಗಳಿದ್ದು, ಮಕ್ಕಳ ಹಕ್ಕುಗಳು ಎಂದರೇನು ಎಂದು ವಿಶದೀಕರಿಸುತ್ತಾ ಒಡಂಬಡಿಕೆಯನ್ನು ಒಪ್ಪಿದರೆ ದೇಶಗಳ ಮೇಲೆ ಅವುಗಳಿಂದಾಗುವ ಪರಿಣಾಮಗಳನ್ನು ತಿಳಿಸುತ್ತದೆ. ಎರಡು ಮತ್ತು ಮೂರನೆಯ ಭಾಗಗಳಲ್ಲಿ ಹಕ್ಕುಗಳ ಜಾರಿಗೆ ತೆಗೆದುಕೊಳ್ಳಬೇಕಾದ ಕ್ರಮಗಳ ವಿವರಗಳಿವೆ. ಇಡೀ ಒಡಂಬಡಿಕೆ ಮುಂದಿನ ನಾಲ್ಕು ಪ್ರಮುಖ ಸಂಗತಿಗಳನ್ನು ಮತ್ತೆ ಮತ್ತೆ ಎತ್ತಿ ಹಿಡಿಯುತ್ತದೆ :

- ಮಕ್ಕಳಿಗೆ ಹಕ್ಕುಗಳನ್ನು ಕೊಡಬೇಕಾದರೆ ಯಾವುದೇ ರೀತಿಯ ತಾರತಮ್ಯತೆಗೆ ಅವಕಾಶವಿಲ್ಲ, ದೇಶ, ಭಾಷೆ, ರಾಜ್ಯ, ಜಾತಿ, ಲಿಂಗ, ಬಣ್ಣ, ಧರ್ಮ, ಶಿಕ್ಷಣ ಮಟ್ಟ, ಬಡವ-ಬಲ್ಲಿದ, ಕುಟುಂಬದ ಹಿನ್ನೆಲೆ ಈ ಯಾವುದೂ ಅಡ್ಡಿ ಬರಬಾರದು.
- ಮಕ್ಕಳನ್ನು ಕುರಿತ ನಿರ್ಧಾರಗಳನ್ನು ಕೈಗೊಳ್ಳಬೇಕಾದರೆ ಅದು ಎಷ್ಟರ ಮಟ್ಟಿಗೆ ಮಕ್ಕಳ ಪರವಾಗಿದೆ ಮತ್ತು ಮಕ್ಕಳ ಹಿತರಕ್ಷಣೆಗಾಗಿ ಇದೆ ಎಂದು ವಿಮರ್ಶಿಸಿ ನೋಡಬೇಕು.
- ಮಕ್ಕಳಿಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸುವ, ಅದರಂತೆ ನಡೆಯಲು ಒತ್ತಾಯಿಸುವ ಹಕ್ಕಿದೆ. ಅಂತಹ ಸಂದರ್ಭಗಳಲ್ಲಿ ಅವರ ಮಾತಿಗೆ ಬೆಲೆ ಕೊಡಬೇಕು.
- ಯಾವುದೇ ದೇಶದಲ್ಲಿ ಮಕ್ಕಳ ಹಕ್ಕುಗಳ ಒಡಂಬಡಿಕೆಯಲ್ಲಿ ಹೇಳಿರು ವುದಕ್ಕಿಂತ ಉತ್ತಮವಾದ ಮತ್ತು ಮಕ್ಕಳ ಪರವಾದ ಕಾನೂನುಗಳಿದ್ದಲ್ಲಿ ಅವುಗಳನ್ನು ಉಳಿಸಿಕೊಳ್ಳಬೇಕು.

(ಸದ್ಯ ಚಾಲ್ತಿಯಲ್ಲಿರುವ ಕಾನೂನುಗಳು ಮಕ್ಕಳ ವಿರೋಧಿಯಾಗಿದ್ದರೆ ಒಡಂಬಡಿಕೆಯನ್ನು ಒಪ್ಪಿದ ಮೇಲೆ ಅವುಗಳನ್ನು ತೆಗೆದುಹಾಕಿದಂತೆಯೇ ಭಾವಿಸಬೇಕು!)

ಇದಿಷ್ಟು ಮಕ್ಕಳ ಹಕ್ಕುಗಳ ಒಡಂಬಡಿಕೆಯ ಜಾರಿಯ ಹಿನ್ನಲೆ. ಮಕ್ಕಳಿಗೆ ಸಂಬಂಧಪಟ್ಟ ಯಾವ ಯಾವ ಕ್ಷೇತ್ರಗಳ ಬಗ್ಗೆ ಈ ಒಡಂಬಡಿಕೆ ಗಮನ ಹರಿಸಿದೆ ಎಂದು ನೋಡಿ ಆನಂತರ ಒಡಂಬಡಿಕೆಯೊಳಗೆ ಪ್ರವೇಶಿಸೋಣ.

ಮಕ್ಕಳು ಮತ್ತು ಅವರ ಪೋಷಕರು ಆ ಸಂಬಂಧಿತ ಬಾಧ್ಯತೆಗಳು; ತಾನು ಇಂಥವನು/ಇಂಥವಳು ಎಂದು ಗುರುತಿಸಿಕೊಳ್ಳುವ ಹಕ್ಕು; ಸರ್ಕಾರ ಕೈಗೊಳ್ಳಬೇಕಾದ ಕ್ರಮಗಳು; ದತ್ತು, ತಾತ್ಕಾಲಿಕ ಪೋಷಣೆ, ರಕ್ಷಣೆ; ತಾಯಿ-ತಂದೆ ಮತ್ತು ಕುಟುಂಬದೊಡನೆ ಮರಳಿ ಸೇರುವುದು; ಮಕ್ಕಳಿಗೆ ತಮ್ಮ ಅಭಿಪ್ರಾಯಗಳನ್ನು ಮಂಡಿಸಲು ಇರುವ ಸ್ವಾತಂತ್ರ್ಯ; ತಮಗೆ ಸರಿತೋರಿದ ಧರ್ಮವನ್ನು ಪಾಲಿಸುವ ಸ್ವಾತಂತ್ರ್ಯ; ಶಿಕ್ಷಣ ಮನರಂಜನೆ ಹೊಂದುವ ಹಕ್ಕು,

ಮಕ್ಕಳಿಗೂ ಏಕಾಂತವಾಗಿರುವ ಹಕ್ಕಿದೆ; ಅವರ ಮನಸ್ಸು ದೇಹಗಳ ಮೇಲೆ ದಾಳಿಯಾಗುವುದರ ವಿರುದ್ಧ ಹಕ್ಕು; ಮಕ್ಕಳಿಗೂ ಸಾಂಘಿಕ ಚಟುವಟಿಕೆಗಳಲ್ಲಿ ತೊಡಗುವ ಹಕ್ಕಿದೆ; ಎಲ್ಲ ಮಕ್ಕಳಿಗೂ ಸಾಮಾಜಿಕ ಭದ್ರತೆ, ಸೂಕ್ತವಾದ ಜೀವನ ಮಟ್ಟವನ್ನು ಕೊಡಮಾಡುವುದು; ಅಂಗವಿಕಲ ಮಕ್ಕಳಿಗೆ ನೀಡಲೇ ಬೇಕಾದ ಸೌಕರ್ಯಗಳು;

ಮಕ್ಕಳನ್ನು ದುಡಿಸುವುದರ ವಿರುದ್ಧ, ಮಕ್ಕಳ ಮೇಲಾಗಬಹುದಾದ ಲೈಂಗಿಕ ದೌರ್ಜನ್ಯದ ವಿರುದ್ಧ, ಅಶ್ಲೀಲ ಸಾಹಿತ್ಯ/ಚಿತ್ರಗಳಲ್ಲಿ ಮಕ್ಕಳನ್ನು ಬಳಸುವುದರ ವಿರುದ್ಧ, ಮಾದಕ ವಸ್ತು/ದ್ರವ್ಯಗಳನ್ನು ಬಳಸುವಂತೆ ಮಕ್ಕಳನ್ನು ಪ್ರಚೋದಿಸುವುದರ ವಿರುದ್ಧ-ರಕ್ಷಣೆಗೆ ಹಕ್ಕು;

ಮಕ್ಕಳ ಅಪಹರಣ, ಮಾರಾಟ, ಶೋಷಣೆಯ ವಿರುದ್ಧ ರಕ್ಷಣೆ; ಅವರಿಗೆ ಹಿಂಸೆ ಕೊಡುವುದರ, ಅಮಾನವೀಯವಾಗಿ ವರ್ತಿಸುವುದರ ವಿರುದ್ಧ ಕೈಗೊಳ್ಳಬಹುದಾದ ಕ್ರಮಗಳು;

ತಪ್ಪು ಮಾಡಿದ ಮಕ್ಕಳೊಡನೆ ನಡೆದುಕೊಳ್ಳಬೇಕಾದ ರೀತಿ-ನೀತಿಗಳು ಮತ್ತು ಮಕ್ಕಳನ್ನು ಸೈನ್ಯಕ್ಕೆ ಸೇರಿಸಿಕೊಳ್ಳದಂತೆ ಕೈಗೊಳ್ಳಬೇಕಾದ ಕ್ರಮಗಳು, ಇವಿಷ್ಟೆ ಅಲ್ಲ, ಅತ್ಯಂತ ಸಂಕಷ್ಟದಲ್ಲಿರುವ ಅಂಗವಿಕಲ, ಬೀದಿಯಲ್ಲಿರುವ, ವೇಶ್ಯಾವೃತ್ತಿಗೆ ದೂಡಲ್ಪಟ್ಟ, ಮೂಲನಿವಾಸಿ ಹಾಗೂ ಅಲ್ಪಸಂಖ್ಯಾತರ ಮಕ್ಕಳು, ನಿರಾಶ್ರಿತರ ಮಕ್ಕಳು, ಕಾನೂನಿನ ವಿರುದ್ಧ ಸೆಟೆದು ನಿಂತ ಮಕ್ಕಳು, ಶಸ್ತ್ರಸಂಘರ್ಷಗಳಲ್ಲಿ ಸಿಲುಕಿದ ಮಕ್ಕಳು-ಇವರ ಬಗ್ಗೆ ವಿಶೇಷ ಕಾಳಜಿ ತೋರಬೇಕೆಂದು ಸ್ಪಷ್ಟವಾಗಿ ಹೇಳಲಾಗಿದೆ.

ಇಲ್ಲಿಂದ ಮುಂದೆ ಒಡಂಬಡಿಕೆಯಲ್ಲಿನ ವಿವಿಧ ಪರಿಚ್ಛೇದಗಳು ಏನು ಹೇಳುತ್ತದೆ, ಅವುಗಳನ್ನು ನಮ್ಮ ಪರಿಸರದ ಹಿನ್ನೆಲೆಯಲ್ಲಿ ಹೇಗೆ ಗಮನಿಸಬೇಕು ಎಂದು ನೋಡೋಣ.



# ಭಾಗ-2



ಈ ಭಾಗದಲ್ಲಿ ಪ್ರಮುಖವಾಗಿ ನಾಲ್ಕು ವಿಭಾಗಗಳಿವೆ:

1. ಬದುಕುವ ಹಕ್ಕು (ಅಧ್ಯಾಯ 1, 2)
2. ರಕ್ಷಣೆಯ ಹಕ್ಕು (ಅಧ್ಯಾಯ 3, 4)
3. ವಿಕಾಸ ಹೊಂದುವ ಹಕ್ಕು (ಅಧ್ಯಾಯ 6)
4. ಭಾಗವಹಿಸುವ ಹಕ್ಕು (ಅಧ್ಯಾಯ 7)

ಎಲ್ಲ ವಿಭಾಗಗಳಲ್ಲಿ ಈ ಮುಂದಿನವುಗಳನ್ನು ಕಾಣುವಿರಿ.

1. ಆಯಾ ಪ್ರಮುಖ ಹಕ್ಕನ್ನು ವಿವರಿಸುವ ಪರಿಚ್ಛೇದಗಳು. ಇದು ಸಿ.ಆರ್.ಸಿ.ಯ ಮೂಲದಲ್ಲಿರುವ ಪರಿಚ್ಛೇದಗಳ ಅನುವಾದವಲ್ಲ. ಅವುಗಳ ಸಾರ ಸಂಗ್ರಹ.
2. ಆಯಾ ಪರಿಚ್ಛೇದದ ಆಶಯವನ್ನು ಎತ್ತಿ ಹಿಡಿಯುವ ಭಾರತದಲ್ಲಿ ಜಾರಿ ಇರುವ ಸಂವಿಧಾನ ಮತ್ತಿತರ ಕಾನೂನುಗಳ ಆಯ್ದ ಅಂಶಗಳು.
3. ಪ್ರತಿ ಪರಿಚ್ಛೇದದ ಬಗ್ಗೆ ಅಲ್ಲಲ್ಲಿ ಕಿರು ವಿವರಣೆ, ಕೆಲವು ಉದಾಹರಣೆಗಳು.
4. ನಿಮ್ಮನ್ನು ಪ್ರಚೋದಿಸಲು ಒಂದಷ್ಟು ಪ್ರಶ್ನೆಗಳು. ಜೊತೆಗೆ ನಿಮ್ಮ ಕಾರ್ಯಕ್ಷೇತ್ರ, ವಿಭಾಗದಲ್ಲಿ ನೀವು ಕೈಗೊಳ್ಳಬಹುದಾದ ಕೆಲವು ಅಭ್ಯಾಸಗಳು. ಅಲ್ಲಲ್ಲಿ ಕೆಲವು ಮೂಲಭೂತವಾದ ಪ್ರಶ್ನೆ ಅಭ್ಯಾಸಗಳನ್ನು ನೋಡಿ ಆಶ್ಚರ್ಯಪಡಬೇಡಿ.

- ನೀವು ಕಂಡುಕೊಂಡ ಉತ್ತರಗಳನ್ನು ಇತರರೊಡನೆ ಹಂಚಿಕೊಳ್ಳಿ. ಪ್ರತಿ ವರ್ಷ ನಿಮ್ಮ ಉತ್ತರಗಳು ಬದಲಾಗಬಹುದು. ಅವುಗಳನ್ನು ಗಮನಿಸುವುದು ಅವಶ್ಯಕ. ನಿಮಗೆ ಸಿಗುವ ಉತ್ತರಗಳನ್ನು ಆಧಾರವಾಗಿಟ್ಟುಕೊಂಡು ನಿಮ್ಮ ಸಮುದಾಯದ ಮಕ್ಕಳ ಸ್ಥಿತಿಗತಿ ಹೇಗಿದೆಯೆಂದು ಸಂಬಂಧಪಟ್ಟ ಅಧಿಕಾರಿಗಳಿಗೆ ನೀವು ವರದಿ ಕಳುಹಿಸಬಹುದು.
- ಪುಸ್ತಕದ ಕೊನೆಯ ಭಾಗದಲ್ಲಿ ಮಕ್ಕಳ ಹಕ್ಕುಗಳ ಒಂದು ಸಿದ್ಧ ಪಟ್ಟಿ ಇದೆ. ಯಾವ ಯಾವ ಪರಿಚ್ಛೇದದ ಬಗ್ಗೆ ಯಾವ ಪುಟದಲ್ಲಿ ವಿವರಿಸಲಾಗಿದೆ ಎಂಬುದನ್ನು ಅದು ಸೂಚಿಸುವುದು.
- ಮಕ್ಕಳ ಹಕ್ಕುಗಳಿಗೆ ಸಂಬಂಧಿಸಿದ ಭಾರತದಲ್ಲಿ ಚಾಲ್ತಿಯಿರುವ ಕಾನೂನುಗಳ ಒಂದು ಪಟ್ಟಿ ಕೊನೆಯಲ್ಲಿದೆ. ಅವುಗಳಲ್ಲಿ ಪ್ರಮುಖವಾದುದನ್ನು ಆರಿಸಿಕೊಂಡು ಕೆಲವು ವಿಚಾರಗಳನ್ನು ಪ್ರತಿ ಪರಿಚ್ಛೇದದ ಜೊತೆ ವಿವರಿಸಿದೆ. ಅಲ್ಲಲ್ಲಿ ಕೆಲವು ಸಂಗತಿಗಳು ಪುನರಾವರ್ತನೆ ಆಗುವುದು.

# ಮಕ್ಕಳು ಬದುಕಿದರೆ ತಾನೆ ಬಾಳುವುದು!



ಮಕ್ಕಳಿಗೆ ಅನೇಕ ಹಕ್ಕುಗಳಿವೆ. ಅವುಗಳನ್ನು ಅವರು ದಕ್ಕಿಸಿಕೊಂಡು ಬಾಳಿ ಬೆಳಗಬೇಕಾದರೆ, ಮೊದಲು ಅವರು ಜೀವಂತವಾಗಿರಬೇಕು. ಜೀವಂತವಾಗಿ ಉಳಿಯುವುದಕ್ಕೆ ಅಪಾಯವಿದೆ, ಬದುಕಿರುವುದಕ್ಕೆ ಅವಕಾಶವಿಲ್ಲ ಎಂದಾದರೆ ಹಕ್ಕುಗಳನ್ನು ಕುರಿತು ಚರ್ಚೆ ಮಾಡಿ ಏನು ಪ್ರಯೋಜನ ? ಮಗುವಿನ ಬದುಕು ಎಂಬುದು ಕೇವಲ 'ಜೀವಂತ'ವಾಗಿರುವುದಕ್ಕೆ ಮಾತ್ರ ಸೀಮಿತವಾಗಿಲ್ಲ. ಅದು ಆರೋಗ್ಯವಾಗಿ, ದೈಹಿಕವಾಗಿ, ಮಾನಸಿಕವಾಗಿ, ಸಾಮಾಜಿಕವಾಗಿ ಬೆಳೆಯಬೇಕೆಂದು ಇಲ್ಲಿನ ಆಶಯ.

ಮಕ್ಕಳ ಬದುಕಿಗೇ ಅಪಾಯ ಒಡ್ಡುವ ಸನ್ನಿವೇಶಗಳು ಯಾವುದೆಂದು ನೋಡೋಣ.ತಾಯ ಗರ್ಭದಲ್ಲಿ ಭ್ರೂಣಾವಸ್ಥೆಯಿಂದಲೇ ಅವು ಪ್ರಾರಂಭವಾಗುತ್ತವೆ. ತಾಯಿಯಾಗಲಿರುವ ಹೆಣ್ಣಿಗೆ ಸರಿಯಾದ ಊಟೋಪಚಾರ, ವಿಶ್ರಾಂತಿ, ವೈದ್ಯಕೀಯ ನೆರವು ಸಿಗದಿದ್ದಲ್ಲಿ ಆ ಭ್ರೂಣ ತಾಯ ಗರ್ಭದಲ್ಲಿಯೇ ಒಣಗಬಹುದು ಇಲ್ಲವೇ ಗರ್ಭಸ್ರಾವವಾಗಿ ನಾಶವಾಗಬಹುದು. ತಾಯ ಗರ್ಭದಲ್ಲಿರುವ ಶಿಶು ಹೆಣ್ಣು ಎಂದು ತಿಳಿದ ಅನೇಕ ಪ್ರಸಂಗಗಳಲ್ಲಿ ಬಲವಂತ ಗರ್ಭಪಾತ. ಭ್ರೂಣಹತ್ಯೆಯ ಬಗ್ಗೆ ಮಕ್ಕಳ ಹಕ್ಕುಗಳ ಒಡಂಬಡಿಕೆಯಲ್ಲಿ ಏನನ್ನೂ ಹೇಳದಿದ್ದರೂ ಮಕ್ಕಳ 'ಬದುಕಿನ' ಕುರಿತು ಮೊದಲ ಸವಾಲು ಇಲ್ಲಿಂದಲೇ ಆರಂಭವಾಗುವುದು ಸ್ಪಷ್ಟ.

ಮಕ್ಕಳು ಹುಟ್ಟಿದ ನಂತರವೂ ಗಂಡು-ಹೆಣ್ಣೆಂಬ ತಾರತಮ್ಯತೆಯಲ್ಲಿ ಸೊರಗುವುದು ಇದ್ದೇ ಇದೆ. ಆರಂಭದ ಹಂತದಲ್ಲೇ ಆರೈಕೆ ಕಾಣದೆ, ವೈದ್ಯಕೀಯ ನೆರವು ಸಿಕ್ಕದೆ, ತಡೆಗಟ್ಟಬಹುದಾಗಿದ್ದ, ಆದರೆ ಹಾಗೆ ಆಗದ ರೋಗಗಳಿಗೆ ಬಲಿಯಾಗುವ ಮಕ್ಕಳ ಸಂಖ್ಯೆಯೂ ಸಹ ಹೆಚ್ಚುತ್ತಿದೆ. ಈ ಹಿಂದೆ ಹೇಳಿದಂತೆ ಬದುಕು ನಡೆಸಲು ಪುಟ್ಟ ಮಕ್ಕಳು ಹೆಣಗಾಡುವುದನ್ನು, ಹೋರಾಡುವುದನ್ನು ಅನೇಕ ಘಟ್ಟಗಳಲ್ಲಿ ಕಾಣಬಹುದು. ಬಡವ/ಶ್ರೀಮಂತ ಕುಟುಂಬಗಳಲ್ಲಿ, ಅಭಿವೃದ್ಧಿ ಹೊಂದಿರುವ/ ಹೊಂದುತ್ತಿರುವ ದೇಶಗಳಲ್ಲಿ, ವಿದ್ಯಾವಂತ/ಅವಿದ್ಯಾವಂತ ವರ್ಗಗಳಲ್ಲಿ, ನಗರ/ಗ್ರಾಮೀಣ ಪ್ರದೇಶಗಳಲ್ಲಿ ಈ ಪರಿಸ್ಥಿತಿಯಿದೆ. ಯಾವ ಮಕ್ಕಳಿಗೆ ಬದುಕುವ ಹಕ್ಕು ಒಂದು ಸವಾಲಾಗಿದೆ, ಯಾರಿಗೆ ಬದುಕುವ ಹಕ್ಕನ್ನು ತಿರಸ್ಕರಿಸಲಾಗಿದೆ ಎಂದು ಸ್ವಲ್ಪ ಯೋಚಿಸಿ. ಇಂತಹ ಮಕ್ಕಳು ಎಲ್ಲೆಲ್ಲಿದ್ದಾರೆ, ಅವರಿಗೇಕೆ ಇಂತಹ ಪರಿಸ್ಥಿತಿ ಬಂದಿದೆ ಎಂದು ಸಹ ಆಲೋಚಿಸಿ. ಸಾಧ್ಯವಾದಲ್ಲಿ ಬರೆದಿಡಿ. ಮುಂದಿರುವ ವಿಚಾರಗಳಿಗೆ ಅವನ್ನು ತಾಳೆಹಾಕಿ ನೋಡಿ..

***೯೦ರ ದಶಕದಲ್ಲಿ...***

- ★ ಭಾರತದಲ್ಲಿ 0-6 ವರ್ಷದವರಲ್ಲಿ 4 ಮಿಲಿಯನ್ (ದಶಲಕ್ಷ) ಹೆಣ್ಣು ಮಕ್ಕಳು ನಾಪತ್ತೆಯಾಗಿದ್ದಾರೆ. ಸತ್ಯಸಂಗತಿಯೆಂದರೆ ಅವರೆಲ್ಲ ಸತ್ತು ಹೋಗಿದ್ದಾರೆ.
- ★ ಹುಟ್ಟಿದ 1000 ಮಕ್ಕಳಲ್ಲಿ 79 ಮಕ್ಕಳು ವರ್ಷ ತುಂಬುವುದರೊಳಗೇ ಸಾಯುತ್ತವೆ ಮತ್ತು 124 ಮಕ್ಕಳು 5 ವರ್ಷ ಮುಗಿಸುವುದರೊಳಗೆ ಸಾಯುತ್ತವೆ.
- ★ ಚಿಕಿತ್ಸೆಗೆ ಬರುವ ಪ್ರತಿ 100 ಮಕ್ಕಳಲ್ಲಿ ಹೆಣ್ಣು ಮಕ್ಕಳ ಸಂಖ್ಯೆ ಕೇವಲ 34.
- ★ ಗ್ರಾಮೀಣ ಪ್ರದೇಶದಲ್ಲಿ ಹುಟ್ಟುವ ಮಕ್ಕಳಲ್ಲಿ ಕೇವಲ ಶೇ.16% ಮಕ್ಕಳಿಗೆ ಮಾತ್ರ ವೈದ್ಯಕೀಯ ನೆರವು ದೊರಕುತ್ತದೆ.
- ★ ಇಡೀ ಜಗತ್ತಿನಲ್ಲಿ ಪ್ರತಿದಿನ 40000 ಮಕ್ಕಳು ತಡೆಗಟ್ಟಬಹುದಾದ ರೋಗಗಳು ಮತ್ತು ದುರಂತಗಳಿಗೆ ಬಲಿಯಾಗುತ್ತಾರೆ.

ಜನ್ಮ ಕೊಡುವುದು, ಜೀವಿಸುವುದು, ಆರೋಗ್ಯಸೇವೆ, ಪೌಷ್ಟಿಕ ಆಹಾರ, ಹೆಸರು ಹೊಂದಿರುವುದು, ಪ್ರಜೆ ಎಂಬ ಗುರುತು, ಶುದ್ಧ ಕುಡಿಯುವ ನೀರು, ಮನೆ....ಈ ಕೆಲವು ವಿಚಾರಗಳು/ ಅಗತ್ಯಗಳು ಮಕ್ಕಳಿಗೆ ದೊರೆಯಬೇಕೆಂದು ಒಡಂಬಡಿಕೆಯ 18 ಪರಿಚ್ಛೇದಗಳಲ್ಲಿ ಪ್ರತಿಪಾದಿಸಲಾಗಿದೆ.



## ಮಗು

'ಮಗು' ಎಂದೊಡನೆ ಬರುವ ಮೊದಲ ಪ್ರಶ್ನೆ 'ಎಷ್ಟು ವಯಸ್ಸಿನ ಒಳಗಿನವರನ್ನು ಮಗು ಎನ್ನಬೇಕು?'

- ಮಕ್ಕಳ ಹಕ್ಕುಗಳ ಒಡಂಬಡಿಕೆ 18 ವರ್ಷದೊಳಗಿನವರನ್ನು ಮಗು ಎನ್ನುತ್ತದೆ.
- ಭಾರತೀಯ ಪ್ರೌಢತೆ ಕಾನೂನು (Indian Majority Act-1875); ಹಿಂದೂ ದತ್ತು ಮತ್ತು ನಿರ್ವಹಣಾ ಕಾನೂನು (Hindu Adoption and Maintainence Act 1956) ಮತ್ತು ಹಿಂದೂ ಅಪ್ರಾಪ್ತ ವಯಸ್ಕರು ಮತ್ತು ಪೋಷಕರ ಕಾನೂನು (Hindu Minority & Guardianship Act-1956) ಇವೆಲ್ಲವೂ 18 ವರ್ಷದೊಳಗಿನವರನ್ನು 'ಮಗು' ಎಂದು ವ್ಯಾಖ್ಯಾನಿಸುತ್ತದೆ.
- ಮಕ್ಕಳಿಗೆ ನ್ಯಾಯ ಕಾನೂನು (Juvenile Justice Act-1986) 16 ವರ್ಷದೊಳಗಿನ ಗಂಡು ಹಾಗೂ 18 ವರ್ಷದೊಳಗಿನ ಹೆಣ್ಣು ಮಗುವನ್ನು 'ಮಗು' ಎಂದು ಹೇಳುತ್ತದೆ.
- ಹಿಂದೂ ವಿವಾಹ ಕಾನೂನು (Hindu Marraige Act-1955) ಹಾಗೂ ಬಾಲ್ಯ ವಿವಾಹ ತಡೆ ಕಾನೂನು (Child Marraige Restrain (Amendment Act-1978) 21 ವರ್ಷದೊಳಗಿನ ಗಂಡು ಹಾಗೂ 18 ವರ್ಷದೊಳಗಿನ ಹೆಣ್ಣು ಮಗುವನ್ನು 'ಮಗು' ಎನ್ನುತ್ತದೆ.
- ಗಣಿ ಕಾನೂನು (Mines Act-1952) 18 ವರ್ಷ ಒಳಗಿನವರನ್ನು; ಕಾರ್ಖಾನೆ ಕಾನೂನು (Factories Act-1948) 15 ವರ್ಷ ಒಳಗಿನವರನ್ನು; ಸಾರಿಗೆ ಮೋಟಾರು ಕೆಲಸಗಾರರ ಕಾನೂನು (Motor Transport Workers Act-1962); ಬೀಡಿ ಮತ್ತು ಸಿಗಾರ್ ಕೆಲಸಗಾರರು (ವೃತ್ತಿ ಸ್ಥಿತಿಗತಿ) ಕಾನೂನು(Beedi & Cigar Workers Act-1961); ವೃತ್ತಿ ಶಿಕ್ಷಣ ಕಾಯಿದೆ (Aprentice Act-1961); ತೋಟಗಳ ಕಾರ್ಮಿಕರ ಕಾನೂನು (Plantation Labour Act-1951) ಮತ್ತು ವ್ಯಾಪಾರೀ ಹಡಗು ಕಾನೂನು (The Merchant Shipping Act-1958) ಕನಿಷ್ಠ ಮಜೂರಿ ಕಾನೂನು (The Minimum Wages Act-1948) 14 ವರ್ಷದೊಳಗಿನವರನ್ನು 'ಮಗು' ಎಂದು ಹೇಳುತ್ತವೆ.
- ಭಾರತೀಯ ದಂಡ ಸಂಹಿತೆ (Indian Penal Code-1860) 7 ವರ್ಷದೊಳಗಿನವರನ್ನು ಮಗು ಎನ್ನುತ್ತದೆ (ಸೆಕ್ಷನ್-82).
- ಅನಾಥಾಲಯಗಳು ಮತ್ತು ಇತರ ಧರ್ಮಾಲಯಗಳ (ಮೇಲ್ವಿಚಾರಣೆ ಮತ್ತು ಹತೋಟಿ) ಕಾನೂನು (The Orphanages and other Charitable Homes (Supervision and Control) Act. 1960. 18 ವರ್ಷದೊಳಗಿರುವವರ 'ಮಗು' ಎನ್ನುತ್ತದೆ.
- ಅನೈತಿಕ ವ್ಯವಹಾರ (ತಡೆ) ಕಾನೂನು (Immoral Traffic (prevention) Act 1956-16 ವರ್ಷದೊಳಗಿರುವವರ 'ಮಗು' ಎನ್ನುತ್ತದೆ.

ಹೀಗೆ ಕಾನೂನುಗಳಲ್ಲಿ ಮಗು ಎಂಬುದಕ್ಕೆ ಅನೇಕ ವಿವರಣೆಗಳು ಮತ್ತು ವ್ಯತ್ಯಾಸವಿದೆ. ಇಂತಿಷ್ಟೇ ವಯಸ್ಸಿನ ಒಳಗಿನವರನ್ನು 'ಮಗು' ಎಂದು ಸೂಚಿಸಿ, ಮಕ್ಕಳ ಕುರಿತು ಇರುವ ಎಲ್ಲ ಕಾನೂನು ಕಟ್ಟಲೆಗಳಲ್ಲಿ ಈ ಬದಲಾವಣೆಯನ್ನು ತಂದಲ್ಲಿ ಮಕ್ಕಳ ಹಕ್ಕುಗಳ ಜಾರಿಗೆ ಅದೇ ಮೊದಲ ಹೆಜ್ಜೆಯಾಗಬೇಕು. ಈ ರೀತಿ ವ್ಯತ್ಯಾಸಗಳನ್ನು ನಿವಾರಿಸಿ ತಿದ್ದುಪಡಿ ಮಾಡಲು ಸಂಸತ್‌ಗೆ ಮಾತ್ರ ಅಧಿಕಾರವಿದೆ. ಇದರ ಬಗ್ಗೆ ಸಂಸತ್ ಗಮನ ಹರಿಸಬೇಕಾಗಿದೆ.

## ಪೋಷಕರ/ಹೆತ್ತವರ ಜವಾಬ್ದಾರಿ



ಮಕ್ಕಳ ಹಕ್ಕುಗಳನ್ನು ರಕ್ಷಿಸಲು, ಆ ಕುರಿತು ಕಾಳಜಿ ವಹಿಸುವ ಮೊದಲ ಜವಾಬ್ದಾರಿ ಮಕ್ಕಳ ಪೋಷಕರು, ಹೆತ್ತವರು, ಅವರ ಕುಟುಂಬದ ಬಂಧು-ಬಳಗ ಮತ್ತು ಸಮುದಾಯದ್ದು. ಸ್ಥಳೀಯ ಸಂಪ್ರದಾಯ, ಜೀವನ ವಿಧಾನ, ಕಾನೂನುಬದ್ಧವಾಗಿ ಸೀಮಿತವಾದ ಪೋಷಕರು ಸಹ ಈ ಪರಿಧಿಯಲ್ಲಿ ಬರುವರು. ಮಕ್ಕಳ ಶ್ರೇಯೋಭಿವೃದ್ಧಿಗಾಗಿ ಎಂತಹ ಕ್ರಮ ಕೈಗೊಳ್ಳಬೇಕು ಎಂದು ಇವರು ನೀಡುವ ಸಲಹೆಗಳಿಗೆ ಸರಕಾರ ಮನ್ನಣೆ ನೀಡಬೇಕು.

ಮಕ್ಕಳ ಹಕ್ಕುಗಳ ಎಲ್ಲ ಪರಿಚ್ಛೇದಗಳ ಆರಂಭವು 'The states parties....' ಅಂದರೆ ಒಡಂಬಡಿಕೆಯನ್ನು ಒಪ್ಪಿದ 'ರಾಷ್ಟ್ರಗಳ ಸರಕಾರಗಳು...' ಎಂದೇ ಇದೆ. ಒಡಂಬಡಿಕೆಯಲ್ಲಿ ನೀಡಿರುವ ವಾಗ್ದಾನಗಳನ್ನು ಜಾರಿ ಮಾಡುವ ಜವಾಬ್ದಾರಿ ಸರಕಾರಗಳದ್ದೇ ಎಂಬ ಭಾವನೆ ಇಲ್ಲಿ ಬರುವುದು ಸಹಜ. ಪೋಷಕರು ಮತ್ತು ಕುಟುಂಬಗಳಿಗಿರುವ ಜವಾಬ್ದಾರಿಯನ್ನು ಪರಿಚ್ಛೇದ 5 ನೆನಪಿಸುತ್ತಿದೆ. ಮಕ್ಕಳಿಗೆ ಹಕ್ಕುಗಳನ್ನು ಕೊಡಮಾಡಿಸುವಲ್ಲಿ ಎಲ್ಲರ ಪಾತ್ರ ಬಹುಮುಖ್ಯ ಎಂದು ಹೇಳುತ್ತಿದೆ.



ಶಾಸನ

◆ **ಮಕ್ಕಳಿಗೆ ನ್ಯಾಯ ಕಾನೂನು (Juvenile Justice Act-1986)**

ತಪ್ಪು ಮಾಡಿದ ಮಕ್ಕಳನ್ನು ತಮ್ಮ ವಶಕ್ಕೆ ತೆಗೆದುಕೊಂಡ ಅಧಿಕಾರಿಗಳು ಆ ಮಕ್ಕಳನ್ನು ತಮ್ಮ ವಶಕ್ಕೆ ತೆಗೆದುಕೊಂಡಿರುವ ಬಗ್ಗೆ ಆ ಮಕ್ಕಳ ಪೋಷಕರಿಗೆ ತಕ್ಷಣ ತಿಳಿಸಬೇಕು. ಮಗುವನ್ನು ಭೇಟಿಮಾಡಲು, ಮಗುವಿನ ವಿಚಾರಣೆ ಸಂದರ್ಭದಲ್ಲಿ ಹಾಜರಿರಲು ಅವರಿಗೆ ಅವಕಾಶ ನೀಡಬೇಕು.(ಸೆಕ್ಷನ್ - 19)

## ಜೀವಿಸುವ ಹಕ್ಕು



ಪರಿಚ್ಛೇದ 6

**ಪ್ರತಿಯೊಂದು ಮಗುವಿಗೂ ಜೀವಿಸುವ ಹಕ್ಕಿದೆ.**

1. **ಯಾವ ಮಗುವೂ ಸಹ ಅಸ್ವಾಭಾವಿಕ ಸಾವಿಗೆ ಈಡಾಗಬಾರದು. ಯಾವುದಾದರೂ ಸಮುದಾಯ ಮಕ್ಕಳ ಸಾವಿಗೆ ಕಾರಣವಾಗುತ್ತಿದೆ ಎಂದಾದಲ್ಲಿ ಅದು ಆ ಸಮಾಜ ಎಂತಹ ಅಧೋಗತಿಗೆ ಇಳಿದಿದೆ ಎಂಬುದರ ದ್ಯೋತಕ. ಬಡತನ, ವರದಕ್ಷಿಣೆ, ರಕ್ಷಣೆಯ ಕಷ್ಟ, ಇತ್ಯಾದಿ ಕಾರಣಗಳಿಂದ ಮಕ್ಕಳ ಸಾವು ಉಂಟಾಗುತ್ತಿದ್ದರೆ ಆ ಸಮಾಜ ಎಚ್ಚೆತ್ತು ಕೊಳ್ಳಬೇಕು. ಮಕ್ಕಳಿಗಿರುವ ಮೌಲ್ಯಕ್ಕೆ ಗೌರವ ನೀಡಬೇಕು.**
2. **ಆರೋಗ್ಯ ಸೇವೆ ದೊರೆಯದೆ, ಪೌಷ್ಟಿಕ ಆಹಾರ ಸಿಕ್ಕದೆ ಮಕ್ಕಳು ಮರಣಿಸುತ್ತಿದ್ದರೆ ಆ ಕುರಿತು ಜಾಗೃತಿ ಮೂಡಿಸುವುದು, ಶಿಕ್ಷಣ ಕೊಡುವುದು ಸಂಬಂಧಪಟ್ಟ ಎಲ್ಲರ ಕರ್ತವ್ಯ.**



ಶಾಸನ

- ◆ **ಭಾರತದ ಸಂವಿಧಾನದ** 21ನೇ ಪರಿಚ್ಛೇದದಲ್ಲಿ ನಮೂದಿಸಲಾಗಿರುವ 'ಜೀವಿಸುವ ಹಕ್ಕು' ಎಲ್ಲ ವ್ಯಕ್ತಿಗಳಿಗೆ ಬದುಕುವ ಹಕ್ಕಿದೆ ಎಂದು ಹೇಳುತ್ತದೆ.
- ◆ **ಭಾರತೀಯ ದಂಡ ಸಂಹಿತೆ** (Indian Penal Code 1860) ವಿಧಿ 315,316 ಶಿಶು ಹತ್ಯೆಯನ್ನು ಹಾಗೂ ವಿಧಿ 312, 313 ಬಲವಂತ ಗರ್ಭಪಾತವನ್ನು ಶಿಕ್ಷಾರ್ಹ ಅಪರಾಧ ಎಂದು ಹೇಳುತ್ತದೆ.
- ◆ **ಹೆರಿಗೆ ಪೂರ್ವ ಪರೀಕ್ಷಾ ತಂತ್ರಗಳ ನಿಯಂತ್ರಣ ಮತ್ತು ದುರುಪಯೋಗ ತಡೆ) ಕಾನೂನು** (The Prematal Diagnostic Techniques (Regulation & Prevention of misuse) Act-1994) ಹೆಣ್ಣು ಭ್ರೂಣಹತ್ಯೆಯನ್ನು ತಡೆಗಟ್ಟಲು ಭ್ರೂಣಲಿಂಗ ಪರೀಕ್ಷೆ ಮತ್ತು ಭ್ರೂಣ ಹತ್ಯೆಯನ್ನು ಈ ಕಾನೂನು ನಿಷೇಧಿಸುತ್ತದೆ.

ಭಾರತದಲ್ಲಿ ಹುಟ್ಟಿದ ಪ್ರತಿ 1000 ಶಿಶುಗಳಲ್ಲಿ 79 ಶಿಶುಗಳು ಮೊದಲ ವರ್ಷದಲ್ಲಿ, 129 ಮಕ್ಕಳು 5 ವರ್ಷ ತುಂಬುವುದರೊಳಗೆ ಮೃತ್ಯುವಿಗೆ ಈಡಾಗುತ್ತವೆ ಎಂದು ಈಗಾಗಲೇ ತಿಳಿದಿದ್ದೀರಿ.

### 1.1



ಅಭ್ಯಾಸ

ನೀವೊಂದು ಸ್ವಯಂಸೇವಾ ಸಂಸ್ಥೆಯಾಗಿದ್ದಲ್ಲಿ, ಸಹಾಯ ಸಂಸ್ಥೆಯಾಗಿದ್ದಲ್ಲಿ, ಸರ್ಕಾರಿ ಇಲಾಖೆಯಾಗಿದ್ದಲ್ಲಿ ಮುಂದಿನವನ್ನು ಗಮನಿಸಿ :

ನಿಮ್ಮ ಕಾರ್ಯಕ್ಷೇತ್ರದಲ್ಲಿ ...

1. ನೀವು ಮಕ್ಕಳ ಯಾವ ಯಾವ ಉಳಿವಿನ ಆವಶ್ಯಕತೆಗಳನ್ನು ಗಮನಿಸುತ್ತಿದ್ದೀರಿ ? ಹೇಗೆ ?
2. ಯಾವ ಯಾವ ಆವಶ್ಯಕತೆಗಳಿಗೆ ಯಾರೂ ಗಮನ ನೀಡಿಲ್ಲ ? 3. ಯಾವ ಕ್ರಮ, ಯಾರು ಹೇಗೆ ಕೈಗೊಳ್ಳಬೇಕು ?

## 1.2

ನಿಮ್ಮ ಸಮುದಾಯದಲ್ಲಿ ಮಕ್ಕಳು ಸತ್ತರೆ ಯಾರು ದಾಖಲಿಸಿಕೊಳ್ಳುತ್ತಾರೆ ? ಹೇಗೆ ದಾಖಲಿಸುತ್ತಾರೆ ?ಯಾವ ಕಾರಣಗಳಿಂದಾಗಿ ಮಕ್ಕಳು ಸಾಯುತ್ತಾರೆ ಎಂಬುದನ್ನು ಕಂಡುಕೊಳ್ಳಿ. ಆ ಕಾರಣಗಳನ್ನು ತಡೆಗಟ್ಟಬಹುದೆ ? ಶಿಶು ಮರಣಗಳಿಗೆ ಯಾರು ಜವಾಬ್ದಾರರು? ಯಾವ ಯಾವ ಜಾತಿ, ಪಂಗಡ ವರ್ಗದವರಲ್ಲಿ ಮಕ್ಕಳ ಮರಣ ಹೆಚ್ಚು? ಯಾಕೆ ? ತಿಳಿದುಕೊಳ್ಳಿ.

2.1.1 ಈ ಕೆಳಗಿನ ನಮೂನೆಯಲ್ಲಿ ನಿಮ್ಮ ಕಾರ್ಯಕ್ಷೇತ್ರಕ್ಕೆ ಸೇರುವ ಹಳ್ಳಿಗಳಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ದಾಖಲಿಸಿ, ಗಮನಿಸಿ.

| ವರ್ಷ................ | | ರಾಜ್ಯ | ನಿಮ್ಮ ಜಿಲ್ಲೆ | ತಾಲೂಕು | ಹಳ್ಳಿಗಳು/ ಸಮುದಾಯ | | | |
|---|---|---|---|---|---|---|---|---|
| ಈ ವರ್ಷ ಜನಿಸಿದ ಮಕ್ಕಳ ಸಂಖ್ಯೆ | ಗಂಡು | | | | | | | |
| | ಹೆಣ್ಣು | | | | | | | |
| | ಒಟ್ಟು | | | | | | | |
| ಈ ವರ್ಷದಲ್ಲಿ ಸತ್ತ ಮಕ್ಕಳ ಸಂಖ್ಯೆ | | | | | | | | |
| ಗಂಡು ಮಕ್ಕಳು | | | | | | | | |
| ಹೆಣ್ಣು ಮಕ್ಕಳು | | | | | | | | |
| ಒಟ್ಟು | | | | | | | | |
| ಹುಟ್ಟಿ ಒಂದು ವರ್ಷ ತುಂಬುವುದರೊಳಗೆ ಸತ್ತ ಮಕ್ಕಳು | | | | | | | | |
| ಗಂಡು ಮಕ್ಕಳು | | | | | | | | |
| ಹೆಣ್ಣು ಮಕ್ಕಳು | | | | | | | | |
| ಒಟ್ಟು | | | | | | | | |
| ಐದು ವರ್ಷ ಆಗುವುದರೊಳಗೆ ಸತ್ತ ಮಕ್ಕಳು | | | | | | | | |
| ಗಂಡು ಮಕ್ಕಳು | | | | | | | | |
| ಹೆಣ್ಣು ಮಕ್ಕಳು | | | | | | | | |
| ಒಟ್ಟು | | | | | | | | |
| ★ ಶಿಶು ಮರಣ ಪ್ರಮಾಣ | | | | | | | | |
| ★ 5 ವರ್ಷದೊಳಗಿನ ಮಕ್ಕಳ ಮರಣ ಪ್ರಮಾಣ | | | | | | | | |

★(ಸಾವಿರ ಜನಗಳಿಗೆ ಎಷ್ಟು ಸಾವುಗಳು)

ಈ ಸೂತ್ರ ಬಳಸಿ ಮಕ್ಕಳ ಮರಣ ಪ್ರಮಾಣ ಕಂಡುಹಿಡಿಯಿರಿ.

$$\frac{\text{ಸತ್ತ ಮಕ್ಕಳ ಸಂಖ್ಯೆ}}{\text{ಹುಟ್ಟಿದ ಮಕ್ಕಳ ಸಂಖ್ಯೆ}} \times 1000$$

- ಈ ಪಟ್ಟಿಯನ್ನು ಪ್ರತಿವರ್ಷ ತಯಾರಿಸಿ, ಹುಟ್ಟು ಅಥವಾ ಸಾವುಗಳ ಸಂಖ್ಯೆ ಮೇಲೇರುವ ಅಥವಾ ಕೆಳಗಿಳಿಯುವ ಪ್ರವೃತ್ತಿಯನ್ನು ಗಮನಿಸಿ.
- ಒಂದೊಂದು ಹಳ್ಳಿಗೂ ಮಕ್ಕಳ ಮರಣ ಪ್ರಮಾಣ ಕಂಡುಕೊಳ್ಳುವುದು ಅವಾಸವ ಎಂದು ಅನಿಸಿದರೆ, ನಿಮ್ಮ ಕಾರ್ಯಕ್ಷೇತ್ರದ ಒಟ್ಟು ಹಳ್ಳಿಗಳು/ಸ್ಲಂ/ಸಮುದಾಯ ಗಳನ್ನು ಒಟ್ಟು ಹಾಕಿ ಈ ಲೆಕ್ಕ ಮಾಡಿ.
- ಸರಕಾರಿ ದಾಖಲೆಗಳು (ಅಂಗನವಾಡಿಯಲ್ಲಿ ಅಥವಾ ಗ್ರಾಮಲೆಕ್ಕಿಗರಲ್ಲಿ ಈ ಮಾಹಿತಿ ಸಿಗುವುದು) ಹೇಳುವ ಮಾಹಿತಿಗೂ ನಿಮ್ಮ ಮಾಹಿತಿಗೂ ಏನು ವ್ಯತ್ಯಾಸವಿದೆ ಕಂಡುಕೊಳ್ಳಿ.



7 ಒಪ್ಪಂದ

## ಹೆಸರು ಮತ್ತು ರಾಷ್ಟ್ರೀಯತೆ

**1. ಪ್ರತಿಯೊಂದು ಮಗುವಿನ ಹುಟ್ಟು ನಿಗದಿತ ದಾಖಲೆಗಳಲ್ಲಿ ತಕ್ಷಣವೇ ನಮೂದಾಗಬೇಕು. ಹುಟ್ಟಿದ ದಿನಾಂಕ, ಸಮಯ, ಸ್ಥಳ, ತಾಯಿ-ತಂದೆಯ ಹೆಸರು ಮತ್ತು ವಿಳಾಸ ಕಾಣಿಸಬೇಕು. ಒಂದು ಹೆಸರು, ರಾಷ್ಟ್ರೀಯತೆ ಮತ್ತು ಪೋಷಕರ ರಕ್ಷಣೆ ಮಕ್ಕಳ ಹಕ್ಕು.**

**2. ಈ ಹಕ್ಕುಗಳ ಜಾರಿಗಾಗಿ ಸರಕಾರಗಳು ರಾಷ್ಟ್ರೀಯ, ಅಂತಾರಾಷ್ಟ್ರೀಯ ನೀತಿ ನಿಯಮಗಳ ಉಪಯೋಗ ಮಾಡಬೇಕು.**

**ಹೀಗೆ ದಾಖಲಾಗುವ ಮೂಲಕ ಆ ಮಗು ಭಾರತದಲ್ಲಾದರೆ 'ಭಾರತೀಯ', ನೇಪಾಳದಲ್ಲಾದರೆ 'ನೇಪಾಳಿ', ಪಾಕಿಸ್ತಾನದಲ್ಲಾದರೆ 'ಪಾಕಿಸ್ತಾನಿ' ಎಂಬ ಪೌರತ್ವ ಪಡೆಯುವ ಹಕ್ಕು ದೊರೆಯುತ್ತದೆ.**

***-ಹೀಗೆ ದಾಖಲಾದಾಗ ಅನಾಥ, ದೇಶರಹಿತ, ಪೌರತ್ವರಹಿತ ಎಂದಾಗುವುದನ್ನು ತಪ್ಪಿಸಬಹುದು. ಪ್ರತಿಯೊಂದು ಮಗುವಿನ ಜನ್ಮ ದಾಖಲಿಸುವ ಕೆಲಸ ಕೇವಲ ಸರ್ಕಾರದ್ದು ಮಾತ್ರವಲ್ಲ. ಅದು ಪ್ರತಿಯೊಬ್ಬರ ಕರ್ತವ್ಯ.***

ಈ ಲೇಖನ ಓದುತ್ತಿರುವ ನಿಮ್ಮ ಬಳಿ ಜನ್ಮ ದಾಖಲೆ ಪತ್ರ ಇದೆಯೇ? ಇದ್ದರೆ ಅದರಲ್ಲಿ ಯಾವ ಯಾವ ವಿವರಗಳು ಸೇರಿವೆ ಗಮನಿಸಿದ್ದೀರಾ? ಅದರ ಉಪಯೋಗಗಳು ಏನಿರಬಹುದು?

1999ರ ಜುಲೈನಲ್ಲಿ ಚಿಕ್ಕಮಗಳೂರಿನ ಕೆಲವು ಹಳ್ಳಿಗಳಲ್ಲಿ ಮಕ್ಕಳನ್ನು ಪ್ರಾಥಮಿಕ ಶಾಲೆಗೆ ಸೇರಿಸಲು ಶ್ರೀ ಶಾಮಣ್ಣ ಎಂಬ ಸಮಾಜ ಸೇವಾ ಕಾರ್ಯಕರ್ತರು ಪ್ರಯತ್ನಿಸಿದರು. ಆದರೆ ಮಕ್ಕಳನ್ನು ಶಾಲೆಗೆ ಸೇರಿಸಿಕೊಳ್ಳಲು ನಿರಾಕರಿಸಲಾಯಿತು! ಕಾರಣ ಆ ಮಕ್ಕಳ ತಂದೆ- ತಾಯಿಗಳ ಬಳಿ ಮಕ್ಕಳ ಜನ್ಮ ದಾಖಲೆ ಪತ್ರ ಇರಲಿಲ್ಲ. ಈ ಪ್ರಸಂಗ ನಡೆದುದು 'ಮಕ್ಕಳನ್ನು ಶಾಲೆಗೆ ಸೇರಿಸಿ' ಎಂಬ ವಿಶೇಷ ಆಂದೋಲನದ ಸಂದರ್ಭದಲ್ಲಿ!

ಮಕ್ಕಳ ಜನ್ಮ ದಾಖಲೆ ಇಲ್ಲವೆಂದರೆ ಅವರು ಹುಟ್ಟೇ ಇಲ್ಲ ಎಂದೇನು ? ಅವರಿಗೆ ಭಾರತದ ಪೌರತ್ವವೇ ಇಲ್ಲವೆ ? ಅವರ ಅಪ್ಪ-ಅಮ್ಮ ಯಾರೆಂಬುದು ಖಚಿತವಿಲ್ಲವೆ ? ಅವರಿಗೆ ವಿಳಾಸವೆ ಇಲ್ಲವೆ? ಇಂಥ ಹಲವಾರು ಪ್ರಶ್ನೆಗಳು ಏಳುತ್ತವೆ. ಇವೆಲ್ಲವೂ ಜನ್ಮದಾಖಲೆಗಿರುವ ಪ್ರಾಮುಖ್ಯತೆಯನ್ನು ತೋರಿಸುತ್ತದೆ. ಅಷ್ಟೇ ಅಲ್ಲ, ಬಾಲಕಾರ್ಮಿಕರ ಜೊತೆ ಶೈಕ್ಷಣಿಕ ಕಾರ್ಯಕ್ರಮಗಳನ್ನು ನಡೆಸುವ ಅನೇಕ ಸಂಸ್ಥೆಗಳಿಗೂ ಇದೇ ಸಮಸ್ಯೆ ಎದುರಾಗಿದೆ. ಮಕ್ಕಳು 5ನೇ ತರಗತಿಗೋ ಅಥವಾ 7ನೇ ತರಗತಿಗೋ ನೇರವಾಗಿ ಪರೀಕ್ಷೆ ಬರೆಯಲು ಹೋದಾಗ ಸಂಬಂಧಪಟ್ಟವರು ಮಕ್ಕಳ ವಯಸ್ಸಿನ ಪ್ರಶ್ನೆ ಎತ್ತುತ್ತಾರೆ. ಆಗ ನ್ಯಾಯಾಲಯದ ಮುಂದೆ ಹೋಗಿ ''ಅಫಿಡವಿಟ್'' ಮಾಡಿಸುವ ಧಾವಂತ! ಇವುಗಳಿಗೆಲ್ಲ ಏನು ಪರಿಹಾರ?



ಕಾನೂನು

- **ಭಾರತೀಯ ಸಂವಿಧಾನದ** 5ನೇ ಪರಿಚ್ಛೇದ ಭಾರತದಲ್ಲಿ ಹುಟ್ಟಿದವರನ್ನೆಲ್ಲಾ ಭಾರತೀಯ ಪ್ರಜೆ ಎಂದು ಗುರುತಿಸುತ್ತದೆ.
- **ಭಾರತೀಯ ಪೌರತ್ವದ ಕಾನೂನಿನ** (Citizenship Act 1955) ಪ್ರಕಾರ ಒಬ್ಬ ವ್ಯಕ್ತಿ ಹುಟ್ಟು ಅಥವಾ ವಂಶಪಾರಂಪರ್ಯವಾಗಿ ಭಾರತೀಯರಾಗಬಹುದು.
- **ಜನನ-ಮರಣಗಳ ದಾಖಲೆ ಕಾನೂನು** (Registration of Births and Deaths Act-1969) ಪ್ರಕಾರ ಹುಟ್ಟಿದ ಪ್ರತಿ ಯೊಂದು ಮಗುವಿನ ಬಗ್ಗೆ ದಾಖಲಿಸಲೇ ಬೇಕು ಹಾಗೂ ಜನನ ಪ್ರಮಾಣ ಪತ್ರ ಪಡೆದಿರಬೇಕು.



ಅಭ್ಯಾಸ

**1.3**

- ನಿಮ್ಮ ಸಮದಾಯದಲ್ಲಿ ಮಕ್ಕಳ ಜನನ ದಾಖಲೆಗಳನ್ನು ಇಡುವವರು ಯಾರು ಯಾರು ? ಅವರು ಎಲ್ಲಿರುತ್ತಾರೆ? ಅವರು ಕೊಡುವ ದಾಖಲೆಪತ್ರ ಎಂತಹದು ? ತಿಳಿದುಕೊಳ್ಳಿ. ಅಂಗನವಾಡಿ ಕಾರ್ಯಕರ್ತೆ ಹಾಗೂ ಗ್ರಾಮಲೆಕ್ಕಿಗರಿಂದ ಏನಾದರೂ ಪ್ರಯೋಜನವಿದೆಯೆ ತಿಳಿಯಿರಿ.
- ಗರ್ಭಿಣಿ ಮಹಿಳೆಯರನ್ನು ಸಂಪರ್ಕಿಸಿ ಅವರಿಗೆ ಮಕ್ಕಳ ಜನ್ಮ ದಾಖಲೆ ಪತ್ರದ ಪ್ರಾಮುಖ್ಯತೆ ಬಗ್ಗೆ ತಿಳಿಸಿ.
- ''ಅಫಿಡವಿಟ್''(Affidavit) ಎಂದರೇನು ? ಅದನ್ನು ಪಡೆಯಲು ಎಷ್ಟು ಶುಲ್ಕ (ಸ್ಟಾಂಪ್ ಹಾಗೂ ಕೋರ್ಟ್ ಫೀ) ತಿಳಿದುಕೊಳ್ಳಿ.
- ನಿಮ್ಮ ಅನುಭವಗಳನ್ನು ಇತರರೊಂದಿಗೆ ಹಂಚಿಕೊಳ್ಳಿ.



8 ವಿಧಿ

## ಅನನ್ಯತೆ/ವ್ಯಕ್ತಿತ್ವ

1. ಮಗುವಿನ ಹೆಸರು, ಕೌಟುಂಬಿಕ ಸಂಬಂಧಗಳು, ರಾಷ್ಟ್ರೀಯತೆಯನ್ನೂ ಒಳಗೊಂಡಂತೆ ಎಲ್ಲ ರೀತಿಯ ಅನನ್ಯತೆಯನ್ನು ಗೌರವಿಸುವುದು, ರಕ್ಷಿಸುವುದು ಸರ್ಕಾರದ ಕರ್ತವ್ಯ.
2. ಆಕಸ್ಮಾತ್ ಯಾವುದಾದರೂ ಮಗುವಿನ ಅನನ್ಯತೆಗೆ ಭಂಗ ಬಂದಲ್ಲಿ ಅದನ್ನು ಆದಷ್ಟು ಬೇಗ ಗುರುತಿಸಿ ಸರಿಪಡಿಸುವುದು ಸಹ ಸರ್ಕಾರಗಳ ಕರ್ತವ್ಯ.



9 ವಿಧಿ

## ಪೋಷಕರ ರಕ್ಷಣೆ

ಮಕ್ಕಳು ಅವರವರ ತಂದೆ-ತಾಯಿಯರೊಂದಿಗೆ ಇರುವುದು ಸ್ವಾಭಾವಿಕ. ಮಕ್ಕಳನ್ನು ತಂದೆ-ತಾಯಿಯರಿಂದ ಬೇರ್ಪಡಿಸಬಾರದು. ಆದರೆ ಅಂತಹ ಪ್ರಸಂಗ ಬಂದುದೇ ಆದಲ್ಲಿ ಅಂತಹ ಬೇರ್ಪಡಿಕೆ 'ಮಗುವಿನ ಹಿತದೃಷ್ಟಿಯಿಂದ' ಮಾತ್ರ ಆಗಬೇಕು. ಅದಕ್ಕೆ ಕಾನೂನಿನ ಅವಕಾಶವಿರಬೇಕು. ಮಗುವಿಗೆ ಕುಟುಂಬದಲ್ಲೇ ತೊಂದರೆ ಇದ್ದಲ್ಲಿ, ದೌರ್ಜನ್ಯಗಳಾಗುತ್ತಿದ್ದಲ್ಲಿ ಅಥವಾ ತಂದೆ-ತಾಯಿ ವಿಚ್ಛೇದನ ಹೊಂದಿದ್ದಲ್ಲಿ, ತಂದೆ/ತಾಯಿ ಅಥವಾ ಇಬ್ಬರನ್ನೂ ಕಾನೂನಿನನ್ವಯ ಬಂಧನದಲ್ಲಿ ಇಟ್ಟದ್ದಲ್ಲಿ, ಸ್ವದೇಶದಿಂದ ಉಚ್ಚಾಟನೆ ಮಾಡಿದಲ್ಲಿ ಅಥವಾ ಅವರು ಬಂಧನದಲ್ಲಿದ್ದಾಗ ನಿಧನ ಹೊಂದಿದ ಪ್ರಕರಣದಲ್ಲಿ ಅಂತಹ ಮಗುವಿನ ಹಿತದೃಷ್ಟಿಯಿಂದ ಮಗು ತಂದೆ-ತಾಯಿಯರಿಂದ ಬೇರ್ಪಡಬಹುದು.

ತಂದೆ-ತಾಯಿಯರ ವಿಚ್ಛೇದನವಾದಾಗ ಅವರ ಪೈಕಿ ಯಾರೇ ಒಬ್ಬರ ಜೊತೆ ವಾಸಿಸುವ ಮತ್ತು ಇಬ್ಬರೊಡನೆಯೂ ಸಂಪರ್ಕ ಹೊಂದಿರುವ ಹಕ್ಕು ಮಗುವಿಗಿದೆ. ತಂದೆ-ತಾಯಿಯರು ಬಂಧನದಲ್ಲಿದ್ದು ಅಲ್ಲಿಂದಲೇ ಉಚ್ಚಾಟನೆಗೊಂಡಿದ್ದಲ್ಲಿ ಅವರು ಎಲ್ಲಿದ್ದಾರೆ ಎಂಬುದು ಮಗುವಿಗೆ ತಿಳಿಸಬೇಕು. ತಂದೆ- ತಾಯಿಯರಿಂದ ದೂರವಾದ ಮಗುವಿಗೆ ತನ್ನ ಹತ್ತಿರದ ಬಂಧುವಿನೊಂದಿಗೆ ಇರುವ ಹಕ್ಕಿದೆ.

ಈ ಎಲ್ಲವನ್ನೂ ಮಗುವಿನ ಹಿತದೃಷ್ಟಿಯಿಂದ ಅದರ ಬೆಳವಣಿಗೆಗೆ ಮಾರಕವಾಗದಂತಹ ಪರಿಸ್ಥಿತಿಯಲ್ಲೇ ನೋಡಬೇಕು.



ಕಾನೂನು

- ಮುಸ್ಲಿಮರ ವೈಯಕ್ತಿಕ ಕಾನೂನಿನ (Muslims' Personal Law) ಪ್ರಕಾರ ಒಬ್ಬ ಮುಸಲ್ಮಾನ್ ತಂದೆಯು ತನ್ನ ಮಗ ವಯಸ್ಸಿಗೆ ಬರುವವರೆಗೆ ಮತ್ತು ಹುಡುಗಿಯಾದಲ್ಲಿ ಅವಳಿಗೆ ಮದುವೆಯಾಗುವವರೆಗೆ ಮಕ್ಕಳನ್ನು ನೋಡಿಕೊಳ್ಳಬೇಕು.
- ವಿವಾಹ ಕಾನೂನು (ತಿದ್ದುಪಡಿ) (Marriage Laws (Amendment) Act - 1981) ಸೆಕ್ಷನ್-13ಸಿ ಪ್ರಕಾರ ವಿವಾಹೇತರ ಸಂಬಂಧದಲ್ಲಿ ಹುಟ್ಟಿದ ಮಗುವನ್ನು ನೋಡಿಕೊಳ್ಳುವ ಜವಾಬ್ದಾರಿಯು ಪೋಷಕರ ಆರ್ಥಿಕ ಸ್ಥಿತಿಗತಿಯನ್ನು ಅವಲಂಬಿಸಿದೆ.
- ಭಾರತೀಯ ದಂಡ ಸಂಹಿತೆ (Indian Penal Code-1860) ಸೆಕ್ಷನ್ 317ರಂತೆ ಮಗುವನ್ನು ರಕ್ಷಿಸಬೇಕಾದ ಯಾವುದೇ ತಂದೆ, ತಾಯಿ ಅಥವಾ ಪೋಷಕರು ಮಗುವನ್ನು ತೊರೆದು ಹೋಗುವುದು ಶಿಕ್ಷಾರ್ಹ ಅಪರಾಧ.
- ಹಿಂದೂ ಅಪ್ರಾಪ್ತ ವಯಸ್ಕರು ಮತ್ತು ಪೋಷಕರ ಕಾನೂನು (Hindu Minority & Guardianship Act-1956) ಸೆಕ್ಷನ್ 6ರ ಪ್ರಕಾರ ಮದುವೆಯಾಗದ ಹೆಣ್ಣು ಮಗು ಮತ್ತು ಮಗನ ಮೊದಲ ಜವಾಬ್ದಾರಿ ತಂದೆಯದು. ನಂತರ ತಾಯಿಯದು. ಐದು ವರ್ಷ ಪೂರ್ತಿಯಾಗದ ಮಗುವಿನ ಪಾಲನೆ ಸ್ವಾಭಾವಿಕವಾಗಿ ತಾಯಿಯದೇ ಆಗಿದೆ.
- ಹಿಂದೂ ವಿವಾಹ ಕಾನೂನು (Hindu Marriage Act-1955) ಸೆಕ್ಷನ್ 26 ಹಾಗೂ ವಿಶೇಷ ವಿವಾಹ ಕಾನೂನು(Special Marriage Act-1954) ಸೆಕ್ಷನ್ 38ರ ಪ್ರಕಾರ ತಂದೆ-ತಾಯಿಗಳು ವಿಚ್ಛೇದನ ಹೊಂದಿದರೂ ಮಗುವಿನ ಪಾಲನೆಗೆ ಜವಾಬ್ದಾರರು.



1.4

- ನಿಮ್ಮ ಸುತ್ತಮುತ್ತಲಲ್ಲಿ ಈ ಪರಿಚ್ಛೇದದಲ್ಲಿ ಹೇಳಿದಂತಹ ಪ್ರಸಂಗಗಳು ಆದುದು ನಿಮಗೆ ಗೊತ್ತೇ ? ಏನು ನಡೆಯಿತು? ಈಗ ಮಗು ಎಲ್ಲಿದೆ ? ಹೇಗಿದೆ? ನಿಮಗೆ ತಿಳಿದಿರುವುದನ್ನು ಇತರರೊಡನೆ ಹಂಚಿಕೊಳ್ಳಿ.

1.5

- ಮುಂದಿನ ಪರಿಚ್ಛೇದಗಳಿಗೆ ಹೋಗುವ ಮೊದಲು ಈ ಮೇಲಿನ ಚರ್ಚೆಗಳ ಹಿನ್ನೆಲೆಯಲ್ಲಿ 'ಬದುಕುವ' ಹಕ್ಕು ಯಾವ ಮಕ್ಕಳಿಗೆ ದೊರೆತಿಲ್ಲ ಅಥವಾ ದೊರೆಯಬೇಕಿದೆ ಎಂದು ನೋಡೋಣ. ನಿಮ್ಮ ಮನೆ, ಓಣಿ, ಕೇರಿ, ಬಡಾವಣೆ, ಹಳ್ಳಿ, ಊರು, ತಾಲ್ಲೂಕು, ಜಿಲ್ಲೆ ರಾಜ್ಯ, ಮುಂದೆ ದೇಶ ಹಾಗೂ ಇಡೀ ಜಗತ್ತನ್ನು ಗಮನದಲ್ಲಿಟ್ಟುಕೊಂಡು ಹಂತಹಂತವಾಗಿ ಸಾಗಿ ಪಟ್ಟಿ ಮಾಡಿ.

ನೀವು ಮಾಡಿರುವ ಪಟ್ಟಿ ಈ ಕೆಳಗೆ ನೀಡಿರುವುದಕ್ಕೆ ಹೊಂದುತ್ತದೆಯೆ ನೋಡಿ.

- ಹೆಣ್ಣುಮಕ್ಕಳು • ಅಂಗವಿಕಲ ಮಕ್ಕಳು • ದುಡಿಯುವ ಮಕ್ಕಳು • ನಿರಾಶ್ರಿತ ಮಕ್ಕಳು • ಶಿಶುಗಳು
- Human Immuno Deficiency Virus (HIV) ಇರುವ ಮಗು • ಬಡಕುಟುಂಬದ ಮಕ್ಕಳು
- ಬೀದಿಪಾಲಾಗಿರುವ ಮಕ್ಕಳು • ಮಾರಾಟವಾದ ಮಕ್ಕಳು • ದೈಹಿಕ ಹಾಗೂ ಮಾನಸಿಕ ಆಘಾತಕ್ಕೊಳಗಾದ ಮಗು
- ಶಸ್ತ್ರಸಂಘರ್ಷ ಮತ್ತು ಯುದ್ಧಗಳಲ್ಲಿ ಸಿಲುಕಿರುವ ಮಕ್ಕಳು • ಲೈಂಗಿಕವಾಗಿ ತೊಂದರೆಗೀಡಾದ ಮಕ್ಕಳು
- ಅಲ್ಪಸಂಖ್ಯಾತರು/ಮೂಲನಿವಾಸಿಗಳ ಮಕ್ಕಳು • ಪರಿಶಿಷ್ಟ ಜಾತಿ/ಪಂಗಡಗಳ ಮಕ್ಕಳು

ಈ ಎಲ್ಲರನ್ನೂ ಅತ್ಯಂತ ದುರವಸ್ಥೆಯಲ್ಲಿರುವ ಮಕ್ಕಳು ಎಂದು ಹೇಳಲಾಗುತ್ತದೆ. ಇಲ್ಲಿ ನಡೆಯುವ ಚರ್ಚೆಗಳೆಲ್ಲವೂ ಇಂತಹ ಮಕ್ಕಳ ಬದುಕನ್ನು ಹಸನುಗೊಳಿಸುವುದು ಹೇಗೆ ಎಂಬುದನ್ನು ಕುರಿತದ್ದಾಗಿದೆ.

## ದುರುಪಯೋಗದ ತಡೆ



19 ಒಪ್ಪಂದ

**1. ತಂದೆ-ತಾಯಿಯರು/ಪೋಷಕರು ಅಥವಾ ಇನ್ಯಾರದೇ ಆಶ್ರಯದಲ್ಲಿ ಮಗು ಇದ್ದಾಗ ಈ ಮುಂದೆ ಹೇಳಿರುವ ಪರಿಸ್ಥಿತಿಗಳು ಮಗುವಿಗೆ ಬರಬಾರದು - ದೈಹಿಕ ಅಥವಾ ಮಾನಸಿಕ ಹಿಂಸೆ, ಹೊಡೆತ-ಬಡಿತ, ಅದರಿಂದ ಗಾಯಗೊಳ್ಳುವುದು, ದುರುಪಯೋಗ, ನಿರ್ಲಕ್ಷ್ಯ, ಶೋಷಣೆ, ಲೈಂಗಿಕ ಕಿರುಕುಳಗಳಿಗೆ ಈಡಾಗುವುದು. ಇವುಗಳನ್ನು ತಡೆಯಲು ಸರ್ಕಾರ ಸೂಕ್ತ ಕಾನೂನು, ಶಾಸನ, ಆಡಳಿತ, ಸಾಮಾಜಿಕ ಹಾಗೂ ಶೈಕ್ಷಣಿಕ ಕ್ರಮಗಳನ್ನು ಕೈಗೊಂಡು ಮಗುವನ್ನು ರಕ್ಷಿಸಬೇಕು.**

**2. ಹೀಗೆ ಮಾಡುವುದಕ್ಕೆ ಅಗತ್ಯವಿರುವ ಸಾಮಾಜಿಕ ಕಾರ್ಯಕ್ರಮಗಳನ್ನು ಸರ್ಕಾರಗಳು ಕೈಗೊಳ್ಳಬೇಕು. ಅಕಸ್ಮಾತ್ ಯಾವುದಾದರೂ ಮಗುವಿಗೆ ತೊಂದರೆ ಆಗುತ್ತಿದೆಯಾದರೆ ಆ ಕುರಿತು ಮಾಹಿತಿ, ದೂರು ನೀಡುವುದು, ಸೂಕ್ತ ತನಿಖೆ, ನಿರ್ಧಾರ, ಅದರ ಅನುಸರಣೆ ಇತ್ಯಾದಿಗಳ ವ್ಯವಸ್ಥೆ ಆಗಬೇಕು.**



ಕಾನೂನು

- **ಭಾರತದ ಸಂವಿಧಾನ** ಕಲಂ 39(ಸಿ) : ಮಕ್ಕಳ ಪುಟ್ಟ ಹಾಗೂ ಮುಗ್ಧ ದೇಹ, ಮನಸ್ಸುಗಳನ್ನು ಗಮನದಲ್ಲಿಟ್ಟುಕೊಂಡು ಅವರ ಮೇಲೆ ಯಾರೂ ಯಾವುದೇ ದೌರ್ಜನ್ಯ ಉಂಟುಮಾಡಬಾರದು.
- **ಭಾರತೀಯ ದಂಡ ಸಂಹಿತೆ** (Indian Penal Code-1860) ಸೆಕ್ಷನ್ 363(ಎ) : ಮಕ್ಕಳ ಅಪಹರಣ ಅಥವಾ ಮಕ್ಕಳನ್ನು ಅಂಗವಿಕಲಗೊಳಿಸಿ, ಭಿಕ್ಷಾವೃತ್ತಿಗೆ ತಳ್ಳುವುದು ಶಿಕ್ಷಾರ್ಹ ಅಪರಾಧ.
  ಸೆಕ್ಷನ್ 366(ಎ): ಅಪ್ರಾಪ್ತ ವಯಸ್ಸಿನ ಹೆಣ್ಣು ಮಗುವನ್ನು ಯಾವುದೇ ದುರುದ್ದೇಶಕ್ಕೆ ಕರೆದೊಯ್ಯುವುದು/ ಎಳೆದೊಯ್ಯುವುದು ಶಿಕ್ಷಾರ್ಹ ಅಪರಾಧ.
  ಸೆಕ್ಷನ್ 372 ಮತ್ತು 373 : ಅಪ್ರಾಪ್ತ ವಯಸ್ಸಿನ ಹೆಣ್ಣು ಮಗುವನ್ನು ಸೂಳೆಗಾರಿಕೆಗೆ ತಳ್ಳುವ ಉದ್ದೇಶದಿಂದ ಕೊಳ್ಳುವುದು, ಮಾರುವುದು ಶಿಕ್ಷಾರ್ಹ ಅಪರಾಧ.

ಸೆಕ್ಷನ್ 375 : 16 ವರ್ಷದೊಳಗಿನ ಹೆಣ್ಣು ಮಗುವಿನ ಮೇಲೆ ಲೈಂಗಿಕ ದೌರ್ಜನ್ಯ/ದುರುಪಯೋಗ ಶಿಕ್ಷಾರ್ಹ ಅಪರಾಧ. 15 ವರ್ಷದೊಳಗಿನ ಹೆಣ್ಣುಮಗುವನ್ನು ಮದುವೆಯಾಗಿದ್ದರೂ, ಆಕೆಯ ಗಂಡ ಆ ಮಗುವನ್ನು ಸಂಭೋಗಿಸಿದರೆ ಅದನ್ನು ಅತ್ಯಾಚಾರವೆಂದೇ ಪರಿಗಣಿಸಬೇಕು.

- **ಮಕ್ಕಳಿಗೆ ನ್ಯಾಯ** (Juvenile Justice Act-1986)
  ಸೆಕ್ಷನ್ 41 : ಮಕ್ಕಳಿಗೆ ಹಿಂಸೆ ಕೊಡುವುದು ಶಿಕ್ಷಾರ್ಹ ಅಪರಾಧ.
  ಸೆಕ್ಷನ್ 42 : ಮಕ್ಕಳನ್ನು ಭಿಕ್ಷೆಗೆ ದೂಡುವುದು, ಬಲವಂತ ಪಡಿಸುವುದು ಅಪರಾಧ.
  ಸೆಕ್ಷನ್ 43 : ಮಕ್ಕಳಿಗೆ ಮಾದಕ ವಸ್ತು ಕೊಡುವುದು ಮತ್ತು ಆ ಪರಿಸ್ಥಿತಿಯಲ್ಲಿ ಅವರಿರುವಾಗ ಅವರ ದುರುಪಯೋಗ ಶಿಕ್ಷಾರ್ಹ ಅಪರಾಧ.
  ಸೆಕ್ಷನ್ 44 : ಮಕ್ಕಳ ಸಂಪಾದನೆಯನ್ನು ಎತ್ತಿ ಹಾಕುವುದು ಶಿಕ್ಷಾರ್ಹ ಅಪರಾಧ.
- **ಅನೈತಿಕ ವ್ಯವಹಾರ(ತಡೆ) ಕಾನೂನು** (Immoral Traffic (Prevention) Act-1956)
  ಸೆಕ್ಷನ್ 5: ಅಪ್ರಾಪ್ತ ವಯಸ್ಕ ಹೆಣ್ಣುಮಕ್ಕಳನ್ನು ವೇಶ್ಯಾವೃತ್ತಿಗೆ ಸೆಳೆಯುವುದು ಶಿಕ್ಷಾರ್ಹ ಅಪರಾಧ.
  ಸೆಕ್ಷನ್ 9 : ತಮ್ಮ ರಕ್ಷಣೆ, ಪೋಷಣೆ, ವ್ಯಾಪ್ತಿಯಲ್ಲಿರುವ ಹೆಣ್ಣು ಮಗುವನ್ನು ಲೈಂಗಿಕ ಚಟುವಟಿಕೆಗಳಿಗೆ ಪ್ರಚೋದಿಸುವುದು ಶಿಕ್ಷಾರ್ಹ ಅಪರಾಧ.

**1.6**

ಇಲ್ಲಿ ಮೇಲೆ ಹೇಳದಂತಹ ಪ್ರಸಂಗಗಳು ನಿಮ್ಮ ಕಣ್ಣಿಗೆ ಬಿದ್ದರೆ/ತಿಳಿದು ಬಂದರೆ ಏನು ಮಾಡುವಿರಿ ? ನಿಮ್ಮಿಂದ ಅದು ಎಷ್ಟರಮಟ್ಟಿಗೆ ಸಾಧ್ಯ ? ಸಾಧ್ಯವಿಲ್ಲವಾದರೆ ಏಕೆ ಸಾಧ್ಯವಿಲ್ಲ ? ಸಾಧ್ಯವಾಗುವುದು ಹೇಗೆ ?

## ಪೋಷಕರು, ನೆಲೆ ತಪ್ಪಿದ ಮಕ್ಕಳು

20

**ಯಾವುದಾದರೂ ಮಗು ತನ್ನ ತಂದೆ-ತಾಯಿಯರಿಂದ ತಾತ್ಕಾಲಿಕವಾಗಿ ಅಥವಾ ಶಾಶ್ವತವಾಗಿ ದೂರವಾಗುವುದು ಅನಿವಾರ್ಯವಾದರೆ ಅಥವಾ ಅದರ ಹಿತದೃಷ್ಟಿಯಿಂದ ತಂದೆ-ತಾಯಿಯರು ಇರುವ ಪರಿಸರದಲ್ಲಿರುವುದು ಒಳ್ಳೆಯದಲ್ಲ ಎಂದು ತೀರ್ಮಾನವಾದರೆ ಅಂತಹ ಮಗುವಿಗೆ ಸರ್ಕಾರ ನೀಡುವ ವಿಶೇಷ ರಕ್ಷಣೆ ದೊರಕಬೇಕು. ಅದಕ್ಕಾಗಿ ಕೆಲವು ಪರ್ಯಾಯ ವ್ಯವಸ್ಥೆಯನ್ನು ಸೃಷ್ಟಿಸಬೇಕು. ಯಾವುದಾದರೂ ಸೂಕ್ತ ಸಂಸ್ಥೆಯಲ್ಲಿ ಇರಿಸುವುದು ಅಥವಾ ಫಾಸ್ಟರ್‌ಕೇರ್ (fostercare) ಇಸ್ಲಾಮಿಕ್ ಕಾನೂನಿನಲ್ಲಿರುವಂತೆ 'ಕಫಾಲ' ಅಥವಾ ದತ್ತು ಕೂಡ ಆಗಬಹುದು. ಹೀಗೆ ಮಾಡುವಾಗ ಮಗುವಿನ ಜಾತಿ, ಧರ್ಮ, ಭಾಷಾ ಹಿನ್ನೆಲೆ, ರಾಷ್ಟ್ರೀಯತೆಯ ಸಂಬಂಧಗಳಿಗೆ ಭಂಗ ಬರದಂತೆ ನೋಡಿಕೊಳ್ಳುವುದು ಉತ್ತಮ.**

- ಮಕ್ಕಳಿಗೆ ನ್ಯಾಯ (Juvenile Justice Act 1986) ಮೂರನೇ ಭಾಗದಲ್ಲಿ ಸೂಚಿಸಿರುವಂತೆ ನೆಲೆ ತಪ್ಪಿದ ಮಕ್ಕಳಿಗಾಗಿ 'ಬಾಲಕರ ಗೃಹ'ಗಳನ್ನು ಅವರ ವಸತಿ, ಶಿಕ್ಷಣ, ಆಟೋಟ, ತರಬೇತಿ ಮತ್ತು ಪರ್ಯಾಯ ವ್ಯವಸ್ಥೆಗಳಿಗಾಗಿ ತೆರೆಯಲಾಗಿದೆ.

**1.7**

- ದತ್ತು, ಫಾಸ್ಟರ್ ಕೇರ್ ಬಗ್ಗೆ ನಿಮಗೇನು ತಿಳಿದಿದೆ ? ಈ ಬಗ್ಗೆ ಇರುವ ಕಾನೂನು ಎಷ್ಟು ಹಳೆಯದು ? ಈ ಬಗ್ಗೆ ನ್ಯಾಯಾಲಯಗಳ ತೀರ್ಪುಗಳು ಯಾವುವು ? ನಿಮ್ಮ ಊರಿನಲ್ಲಿ ದತ್ತು ನೀಡುವ ಸಂಸ್ಥೆಗಳು ಇವೆಯೇ ? ದತ್ತು ಪಡೆಯುವುದು ಹೇಗೆ ತಿಳಿದುಕೊಳ್ಳಿ.
- ನಿಮ್ಮ ಪ್ರದೇಶದಲ್ಲಿರುವ ಸರಕಾರಿ ಬಾಲಕರ/ಬಾಲಕಿಯರ ಬಾಲಮಂದಿರ ಮತ್ತು ಸರ್ಟಿಫೈಡ್ ಶಾಲೆಗೆ ಭೇಟಿ ನೀಡಿ, ಅದರ ಪರಿಸ್ಥಿತಿಯನ್ನು ಅಧ್ಯಯನ ಮಾಡಿ, ಸಂಬಂಧ ಪಟ್ಟವರೊಡನೆ ಹಂಚಿಕೊಳ್ಳಿ.



21

## ದತ್ತು

**ಮಕ್ಕಳ ಹಿತದೃಷ್ಟಿಯಿಂದ, ಅನಾಥ ಮಕ್ಕಳಿಗೆ ದತ್ತು ವ್ಯವಸ್ಥೆಯನ್ನು ಸರ್ಕಾರ ಗುರುತಿಸಬೇಕು ಅಥವಾ ಅನುಮತಿ ನೀಡಬೇಕು.**

**ಎ. ದತ್ತು ನೀಡುವ ಮೊದಲು ಮಗುವಿನ ಹಿನ್ನೆಲೆ, ಕೌಟುಂಬಿಕ ಪರಿಸರ ಮೊದಲಾದವನ್ನು ತಿಳಿದ ನಂತರವೇ (ಜನ್ಮ ಕೊಟ್ಟ ತಂದೆ/ತಾಯಿ ಅಥವಾ ಅವರಿಬ್ಬರ ಅಥವಾ ಸಂಬಂಧಿಗಳ ಒಪ್ಪಿಗೆ, ಮಗುವಿನ ವಯಸ್ಸು, ದತ್ತು ತೆಗೆದುಕೊಳ್ಳುವವರ ಹಿನ್ನೆಲೆ, ಉದ್ದೇಶ, ವಯಸ್ಸು ಇತ್ಯಾದಿ) ದತ್ತು ನೀಡುವ ಸಂಸ್ಥೆಗಳು ಮುಂದುವರಿಯಬೇಕು.**

**ಬಿ. ನಮ್ಮ ದೇಶದಲ್ಲಿ ಒಂದು ಮಗುವಿನ ಫಾಸ್ಟರ್ ಕೇರ್ ಅಥವಾ ದತ್ತು ಹೋಗುವ ಸಾಧ್ಯತೆಗಳು ಸಂಪೂರ್ಣವಾಗಿ ಇಲ್ಲವೆಂದಾದಾಗ ಮಾತ್ರ ಹೊರದೇಶದವರಿಗೆ ದತ್ತು ನೀಡಬಹುದು.**

**ಸಿ. ಮಗು ಈ ದೇಶದಲ್ಲೇ ಇದ್ದಿದ್ದರೆ ಎಂತಹ ಸೌಲಭ್ಯ, ಸ್ಥಾನಮಾನ ದೊರೆಯುತ್ತಿತ್ತೋ, ಅಷ್ಟೇ ಅಥವಾ ಅದಕ್ಕಿಂತ ಉತ್ತಮವಾದುದು ಹೊರದೇಶದಲ್ಲಿ ಸಿಕ್ಕುವುದರ ಬಗ್ಗೆ ಖಾತರಿಪಡಿಸಿಕೊಳ್ಳಬೇಕು.**

**ಡಿ. ಹೀಗೆ ಹೊರದೇಶಕ್ಕೆ ಮಗುವನ್ನು ಕಳುಹಿಸಿಕೊಡುವ ಸಂದರ್ಭದಲ್ಲಿ ಸಂಬಂಧಪಟ್ಟ ಯಾರಿಗೂ ಯಾವುದೇ ರೀತಿಯಲ್ಲೂ ಸೂಕ್ತವಲ್ಲದ ಮೊತ್ತದ ಹಣ ಸಂಪಾದನೆ ಆಗದಂತೆ ನೋಡಿಕೊಳ್ಳಬೇಕು. ಮಗು ಮಾರಾಟದ ವಸ್ತುವಲ್ಲ.**

**ಇ. ಹೀಗೆ ರಾಷ್ಟ್ರೀಯ ಅಥವಾ ಅಂತಾರಾಷ್ಟ್ರೀಯ ಮಟ್ಟದಲ್ಲಿ ಮಗು ದತ್ತು ಹೋಗುವುದು ಸರ್ಕಾರಗಳಿಂದ ಗುರುತಿಸಲ್ಪಟ್ಟ ಸಂಸ್ಥೆಗಳ ಮೂಲಕವೇ ನಡೆಯಬೇಕು.**



- **ಹಿಂದೂ ದತ್ತು ಮತ್ತು ನಿರ್ವಹಣಾ ಕಾನೂನು** (Hindu Adoption & Maintenance Act-1956) ಸೆಕ್ಷನ್ 7-12ರಂತೆ, 15 ವರ್ಷದೊಳಗಿನ ಮದುವೆಯಾಗದ ಗಂಡು ಅಥವಾ ಹೆಣ್ಣು ಮಗುವನ್ನು ಹಿಂದೂ ವಯಸ್ಕರು ದತ್ತು ತೆಗೆದುಕೊಳ್ಳಬಹುದು. ಭಾರತದಲ್ಲಿ ಹಿಂದೂಗಳಲ್ಲದವರು-ಮುಸುಲ್ಮಾನರು, ಪಾರ್ಸಿ, ಕ್ರಿಶ್ಚಿಯನ್‌ರಿಗೆ ದತ್ತು ನೀಡುವ ಕಾನೂನು ವ್ಯವಸ್ಥೆ ಇಲ್ಲ.
- 1982ರಲ್ಲಿ **ಎಲ್ಲ ಧರ್ಮೀಯರಿಗೆ ಒಂದೇ ರೀತಿಯ ದತ್ತು ಕಾನೂನು** ಕುರಿತು ಪ್ರಸ್ತಾವನೆಯನ್ನು ಸಂಸತ್ತಿನ ಮುಂದೆ ತರಲಾಯಿತು. ಆದರೆ ಈ ಕುರಿತು ಯಾವುದೇ ಬೆಳವಣಿಗೆ ಆಗಿಲ್ಲ.
- ಅಂತಾರಾಷ್ಟ್ರೀಯ ದತ್ತು ಕುರಿತಂತೆ ಸರ್ವೋಚ್ಚ ನ್ಯಾಯಾಲಯದ ತೀರ್ಪು: ನ್ಯಾಯಾಧೀಶ ಭಗವತಿಯವರು 1984ರಲ್ಲಿ ನೀಡಿದ ತೀರ್ಪಿನಂತೆ ಭಾರತೀಯರಿಗೆ ಮಗುವನ್ನು ದತ್ತು ನೀಡಲು ಪ್ರಾಶಸ್ತ್ಯ ನೀಡಬೇಕು. ಮಗು ವಿದೇಶೀ ಪೋಷಕರ ಬಳಿ ಹೋಗುವುದು ಅನಿವಾರ್ಯ ಎಂದಾಗ ಮಾತ್ರ ವಿದೇಶೀ ದತ್ತುವನ್ನು ಮಾನ್ಯ ಮಾಡಬೇಕು. ದತ್ತು ಹೋಗಲು ಇರುವ ಮಕ್ಕಳ ಮೇಲೆ ನಿಗಾ ವಹಿಸಲು ವಾಲಂಟರಿ ಕೋ-ಆರ್ಡಿನೇಷನ್ ಏಜೆನ್ಸಿಗಳನ್ನು ನಿರ್ಮಿಸಬೇಕು. ದತ್ತು ವ್ಯವಹಾರದಲ್ಲಿ ಹಣ ಮತ್ತು ಪ್ರಭಾವ ಪಾತ್ರವಹಿಸದಂತೆ ಸರಕಾರ ನೋಡಿಕೊಳ್ಳಬೇಕು.



### 1.8

- ನಿಮ್ಮ ಪ್ರದೇಶದಲ್ಲಿ ಅನಾಥ ಮಕ್ಕಳನ್ನು ನೋಡಿಕೊಳ್ಳುವ ಹಾಗೂ ದತ್ತು ನೀಡುವ ಸಂಸ್ಥೆಗಳಿವೆಯೆ ? ದತ್ತು ಹೋದ ಪ್ರಕರಣದಲ್ಲಿ ಏನಾದರೂ ಗುಲ್ಲುಗುಮಾನಿ ಇದ್ದಲ್ಲಿ ಆ ಬಗ್ಗೆ ತಿಳಿದುಕೊಳ್ಳಿ.
- ಏಕರೂಪ ದತ್ತು ಕಾಯ್ದೆಯ ಬಗ್ಗೆ ನಡೆದಿರುವ ಚರ್ಚೆಗಳಲ್ಲಿ ಭಾಗವಹಿಸಿರಿ.
- ಮಕ್ಕಳು ಅನಾಥಾಶ್ರಮದಲ್ಲಿ ಬೆಳೆಯುವ ಬದಲು ದತ್ತುಹೋಗಿ ಕುಟುಂಬದಲ್ಲಿ ಬೆಳೆದರೆ ಉತ್ತಮ. ಈ ಬಗ್ಗೆ ಚರ್ಚೆ ಮಾಡಿ.



23

## ಅಂಗವಿಕಲ ಮಕ್ಕಳಿಗೆ ರಕ್ಷಣೆ

1. ಮಾನಸಿಕ ಅಥವಾ ದೈಹಿಕ ಅಂಗವಿಕಲತೆಯಿರುವ ಮಕ್ಕಳೂ ಸಹ ಎಲ್ಲರಂತೆ ಮನುಷ್ಯರೇ. ಅವರಿಗೂ ಸಹ ಅವಕಾಶಗಳನ್ನು ಇತ್ತು ಮುಂದೆ ಗೌರವದಿಂದ, ಸ್ವಾವಲಂಬಿಗಳಾಗಿ, ಜನಸಮುದಾಯಗಳೊಡನೆ ಯಾವುದೇ ತಾರತಮ್ಯತೆ ಇಲ್ಲದೆ ಬದುಕುವಂತೆ ನೋಡಿಕೊಳ್ಳಬೇಕು.

2. ಕುಟುಂಬದಲ್ಲಿ ಅಶಕ್ತ ಅಥವಾ ಅಂಗವಿಕಲ ಮಗು ಇದ್ದರೆ, ಅದು ಆ ಕುಟುಂಬವನ್ನೇ ಅಂಗವಿಕಲರನ್ನಾಗಿಸುವುದು. ಅದು ಒಂದು ರೀತಿಯಲ್ಲಿ ಆರ್ಥಿಕ, ಸಾಮಾಜಿಕ ಹೊರೆ. ಹೀಗಾಗಿ ಇಂತಹ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಸರ್ಕಾರಗಳು ತಮ್ಮ ಇತಿಮಿತಿಗಳಲ್ಲೇ ಇಂತಹ ಕುಟುಂಬಗಳಿಗೆ ಮತ್ತು ಅಂಗವಿಕಲ ಮಕ್ಕಳಿಗೆ ಸೌಲಭ್ಯಗಳನ್ನು ಒದಗಿಸಬೇಕು.

3. ಅಂಗವಿಕಲ ಮಕ್ಕಳು ಸಮಾಜದ ಮುಖ್ಯವಾಹಿನಿಯಲ್ಲಿ ಬೆರೆಯಬೇಕು, ತಾವೂ ಗೌರವದಿಂದ ಬಾಳಬೇಕು ಎಂಬುದು ಸುಲಭದ ಮಾತಲ್ಲ. ಅವರಿಗೆ ವಿಶೇಷ ಶಕ್ತಿ, ಶುಲ್ಕ ರಹಿತ ಶಿಕ್ಷಣ ಹಾಗೂ ವೈದ್ಯಕೀಯ ಸೇವೆ, ತರಬೇತಿ, ಆಟ ಪಾಠಗಳಿಗೆ ಅವಕಾಶ, ಉದ್ಯೋಗ ಅವಕಾಶಗಳನ್ನು ಸರ್ಕಾರಗಳು ಒದಗಿಸಬೇಕು.

4. ಅಂಗವಿಕಲರಿಗೆ ಸೇವಾ ಸೌಲಭ್ಯಗಳು, ಆರೋಗ್ಯ ವ್ಯವಸ್ಥೆ, ಶಿಕ್ಷಣ, ಕೌಶಲ್ಯ ತರಬೇತಿ ಇವೆಲ್ಲವೂ ಹೇಳುವಷ್ಟು ಸುಲಭವಲ್ಲ. ಈ ಸೇವೆ ಸೌಲಭ್ಯಗಳು ಎಲ್ಲಿ, ಹೇಗೆ, ಯಾವಾಗ ಲಭ್ಯವಿದೆ ಎಂಬ ಮಾಹಿತಿಯ ಹಂಚಿಕೆ. ನಿರ್ದಿಷ್ಟ ಸೇವೆಗಳನ್ನು ನೀಡುವುದು ಬಹಳ ಮುಖ್ಯ.



- **ಅಂಗವಿಕಲ ಮಕ್ಕಳಿಗೆ ಸಮಗ್ರ ಶಿಕ್ಷಣ** (Integrated Education for Disabled Children-1987): ಅಂಗವಿಕಲ ಮಕ್ಕಳೂ ಸಹ ಇತರ ಪೂರ್ಣಾಂಗ ಮಕ್ಕಳೊಡನೆ ಬೆರೆತು ಕಲಿಯಲು ಅವಕಾಶ ಕೊಡುವುದು ಹಾಗೂ ಆವಶ್ಯಕತೆ ಇದ್ದಲ್ಲಿ ವಿಕಲಾಂಗರಿಗೆ ವಿಶೇಷ ಶಿಕ್ಷಣ ಕೊಡುವುದು ಹಾಗೂ ಅಂತಹ ವ್ಯವಸ್ಥೆ ಮಾಡುವುದು ಸರ್ಕಾರದ ಕರ್ತವ್ಯ.
- **ಸಮಾನ ಅವಕಾಶ, ಹಕ್ಕುಗಳ ರಕ್ಷಣೆ ಹಾಗೂ ಪೂರ್ಣವಾಗಿ ಭಾಗವಹಿಸುವ ಕಾನೂನು** (Equal Opportunities, Protection of Rights & Full Protection Act-1995) : ಹೆಸರೇ ಹೇಳುವಂತೆ ವಿಕಲಾಂಗರಿಗೆ, ವಿಕಲಾಂಗ ಮಕ್ಕಳಿಗೆ ಸಂಪೂರ್ಣ ಅವಕಾಶ ಕೊಡುವ ಉದ್ದೇಶವನ್ನು ಇದು ಹೊಂದಿದೆ.



**1.9**

- ನಿಮ್ಮ ಪ್ರದೇಶದಲ್ಲಿ ಯಾವ ಯಾವ ರೀತಿಯ ವಿಕಲಾಂಗತೆಗಳು ಕಂಡುಬರುತ್ತವೆ ?
- ಸಾಮಾನ್ಯವಾಗಿ ಯಾವ ವಯಸ್ಸಿನಲ್ಲಿ ಯಾವ ವಿಕಲಾಂಗತೆಯನ್ನು ಗುರುತಿಸಬಹುದು ?
- ಸರಾಸರಿ ಒಂದು ವರ್ಷದಲ್ಲಿ ಎಷ್ಟು ಜನ ವಿಕಲಾಂಗರು ನಿಮ್ಮ ಸಮುದಾಯದಲ್ಲಿ ಕಂಡು ಬರುತ್ತಾರೆ?
- ನಿಮ್ಮ ಸಮುದಾಯವನ್ನು ಗಮನದಲ್ಲಿಟ್ಟುಕೊಂಡು ಮುಂದಿನ ಪುಟದಲ್ಲಿರುವ **ನಮೂನೆ 2.1.2**ನ್ನು ಭರ್ತಿ ಮಾಡಿದ ಮೇಲೆ ಈ ಕೆಳಗಿನ ಪ್ರಶ್ನೆಗಳನ್ನು ಗಮನಿಸಿ.
- ವಿವಿಧ ಅಂಗವಿಕಲತೆಗಳನ್ನು ಗುರುತಿಸುವ ವ್ಯವಸ್ಥೆ ನಿಮ್ಮಲ್ಲಿದೆಯೆ ? ಇವುಗಳಿಗೆ ಬೇಕಾದ ಸೇವಾ ಸೌಲಭ್ಯಗಳು ನಿಮ್ಮ ಸಮುದಾಯದ ಸಾಮಾನ್ಯ ಪ್ರದೇಶದಿಂದ ಎಷ್ಟು ದೂರದಲ್ಲಿ ಲಭ್ಯವಿದೆ? ಪ್ರತಿವರ್ಷ ಇಂತಹ ಪ್ರಕರಣಗಳ ಸಂಖ್ಯೆ ಹೆಚ್ಚಾಗುತ್ತಿದೆಯೇ ಅಥವಾ ಕಡಿಮೆಯಾಗುತ್ತಿದೆಯೇ ?
- ಈ ಪ್ರಕರಣಗಳಿಗೂ ಆಯಾ ಸಮುದಾಯದ ಸಾಮಾಜಿಕ/ಆರ್ಥಿಕ ವಿಚಾರಗಳಿಗೂ ಏನಾದರೂ ಸಂಬಂಧವಿದೆಯೆ ?
- ಈ ಎಲ್ಲ ವಿವರಗಳನ್ನು ಇತರರೊಂದಿಗೆ ಹಂಚಿಕೊಳ್ಳಿರಿ.

**ನಮೂನೆ 2.1.2**

ಹಳ್ಳಿ/ಸ್ಲಂ : ____________________

| ವರ್ಷ................ | ವಯಸ್ಸು-ಎಷ್ಟು ಮಂದಿ | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|
| ವಿಕಲಾಂಗತೆ ಇರುವ ಮಕ್ಕಳು | 0-1 | | 1-3 | | 3-6 | | 6-12 | | 12-16 | | 16-18 | | 18 | | ಒಟ್ಟು | |
| ಹೆಣ್ಣು /ಗಂಡು | ಗ | ಹೆ | ಗ | ಹೆ | ಗ | ಹೆ | ಗ | ಹೆ | ಗ | ಹೆ | ಗ | ಹೆ | ಗ | ಹೆ | ಗ | ಹೆ |
| ಪೋಲಿಯೋ | | | | | | | | | | | | | | | | |
| ಸ್ಪಾಸ್ಟಿಕ್ಸ್ ಪೀಡಿತ ಮಕ್ಕಳು | | | | | | | | | | | | | | | | |
| ಮಾನಸಿಕ ಅಸ್ವಸ್ಥತೆ | | | | | | | | | | | | | | | | |
| ದೃಷ್ಟಿ ದೋಷ | | | | | | | | | | | | | | | | |
| ಶ್ರವಣ ದೋಷ | | | | | | | | | | | | | | | | |
| ಮಾತು ಬರದ ಮಕ್ಕಳು (ಮೂಗರು) | | | | | | | | | | | | | | | | |
| ಅಂಗಾಂಗಗಳ ನಷ್ಟ ಹೊಂದಿರುವ ಮಕ್ಕಳು | | | | | | | | | | | | | | | | |
| ಇತರೆ | | | | | | | | | | | | | | | | |
| ಒಟ್ಟು | | | | | | | | | | | | | | | | |

★ ಈ ಪಟ್ಟಿಯನ್ನು ಪ್ರತಿವರ್ಷ ತಯಾರಿಸಿ, ಸಂಖ್ಯೆ ಮೇಲೇರುವ ಅಥವಾ ಕೆಳಗಿಳಿಯುವ ಪ್ರವೃತ್ತಿಯನ್ನು ಗಮನಿಸಿ.

★ 1000 ಮಕ್ಕಳಲ್ಲಿ ಎಷ್ಟು ಜನ ವಿಕಲಾಂಗರು ಎಂಬುದನ್ನು ಈ ಸೂತ್ರ ಬಳಸಿ ಕಂಡುಕೊಳ್ಳಿ.

$$\frac{\text{ಒಟ್ಟು ವಿಕಲಾಂಗ ಮಕ್ಕಳು}}{\text{ಒಟ್ಟು ಮಕ್ಕಳ ಸಂಖ್ಯೆ}} \times 1000$$

★ ಇದೇ ಮಾದರಿಯಲ್ಲಿ ನಿಮ್ಮ ಒಟ್ಟು ಕಾರ್ಯಕ್ಷೇತ್ರದಲ್ಲಿ ಎಷ್ಟು ಅಂಗವಿಕಲರು ಇದ್ದಾರೆ ಎಂದೂ ಕಂಡುಕೊಳ್ಳಬಹುದು.

# ಮಾಹಿತಿ, ಮಾಹಿತಿಯ ನೆರವಿನಿಂದ ವರದಿ

ಒಂದು ಸಮುದಾಯದ ಮಕ್ಕಳನ್ನು ಕುರಿತು ಮಾಹಿತಿಗಳ ಸಂಗ್ರಹ ಏಕೆ ಬೇಕು ಎಂದು ತಿಳಿದುಕೊಂಡು ಮುಂದೆ ಹೋಗೋಣ. ಭಾಗ-1 ಅಧ್ಯಾಯ-2ರ ಕೊನೆಯ ಪಂಕ್ತಿಯಲ್ಲಿ ಹೇಳಿರುವಂತೆ ಮಕ್ಕಳ ಹಕ್ಕುಗಳ ಒಡಂಬಡಿಕೆಯನ್ನು ಒಪ್ಪಿ ಸಹಿ ಹಾಕಿರುವ ಸದಸ್ಯ ರಾಷ್ಟ್ರಗಳು ಮಕ್ಕಳ ಹಿತರಕ್ಷಣೆಗಾಗಿ . ತಾವು ಕೈಗೊಂಡ ಕ್ರಮಗಳನ್ನು ಹಾಗೂ ತಮ್ಮ ದೇಶದಲ್ಲಿ ಮಕ್ಕಳ ಪರಿಸ್ಥಿತಿ ಹೇಗೆ ಉತ್ತಮಗೊಳ್ಳುತ್ತಿದೆ ಎಂದು ವಿಶ್ವಸಂಸ್ಥೆಗೆ ವರದಿ ಮಾಡುತ್ತಿರಬೇಕು **(ಪರಿಚ್ಛೇದ 44)**.

ಒಡಂಬಡಿಕೆಗೆ ಸಹಿ ಮಾಡಿದ ಮೇಲೆ ಎರಡು ವರ್ಷಗಳ ಕೊನೆಯಲ್ಲಿ ಮೊಟ್ಟಮೊದಲ ವರದಿ; ನಂತರ ಪ್ರತಿ ಐದು ವರ್ಷಗಳಿಗೆ ಒಮ್ಮೆ ವರದಿ ಸಲ್ಲಿಸಬೇಕು. ವಿಶ್ವಸಂಸ್ಥೆಯ ಸದಸ್ಯರಾಷ್ಟ್ರಗಳ ಆಯ್ದ ಸದಸ್ಯರನ್ನೊಳಗೊಂಡ ನಿಗದಿತ ಸಮಿತಿ ಇಂಥ ವರದಿಗಳನ್ನು ವಿಮರ್ಶಿಸುತ್ತದೆ. **(ಪರಿಚ್ಛೇದ 43)**.

ಭಾರತ ಸರ್ಕಾರ ಮಕ್ಕಳ ಹಕ್ಕುಗಳ ಒಡಂಬಡಿಕೆಗೆ ಸಹಿ ಮಾಡಿದ್ದು 1992ರಲ್ಲಿ. ಹಾಗಾಗಿ ಅದರ ಮೊಟ್ಟಮೊದಲ ವರದಿ 1994ರಲ್ಲಿ ವಿಶ್ವಸಂಸ್ಥೆಯ ಕೈಸೇರಬೇಕಿತ್ತು. ಆದರೆ ಅದು ತಲುಪಿದ್ದು 1997ರಲ್ಲಿ. ಆ ವರದಿಯ ವಿಮರ್ಶೆಯನ್ನು ಸಮಿತಿಯು 1999ರ ಜೂನ್ ತಿಂಗಳಲ್ಲಿ ಮಾಡಿತು.

ಇಂತಹ ವರದಿಗಳ ಪ್ರತಿಗಳು ಮುಕ್ತವಾಗಿ ಎಲ್ಲೆಡೆಯೂ ಸಿಗುವಂತಿರಬೇಕೆಂದು ಒಡಂಬಡಿಕೆಯ **44ನೇ ಪರಿಚ್ಛೇದ** ಹೇಳುತ್ತದೆ. ಆದರೆ ಪರಿಸ್ಥಿತಿ ಹೀಗಿಲ್ಲ. ನಮ್ಮಂಥ ದೊಡ್ಡ ದೇಶದಲ್ಲಿ ಜನಸಾಮಾನ್ಯರ ಭಾಷೆಯಲ್ಲದ ಇಂಗ್ಲೀಷಿನಲ್ಲಿ ಸಿದ್ಧವಾದ ವರದಿಯ ಕೆಲವು ಸಾವಿರ ಪ್ರತಿಗಳನ್ನು ಅಚ್ಚು ಹಾಕಿಸಿಟ್ಟರೆ ಸಾಕೆ? (ಒಡಂಬಡಿಕೆಯ ಸಾರಾಂಶವೇ ಇನ್ನೂ ಅನೇಕರಿಗೆ ತಲುಪಿಲ್ಲ. ಇನ್ನು ವರದಿಯ ಪೂರ್ಣಪಾಠ ತಲುಪುವುದೆಲ್ಲಿ ಬಂತು !) **ಪರಿಚ್ಛೇದ 42**ರಲ್ಲಿ ಹೇಳಿರುವಂತೆ ಒಡಂಬಡಿಕೆಯ ಪ್ರತಿ ಎಲ್ಲರಿಗೂ ತಲುಪಬೇಕು. ಹಾಗೆಯೇ ಮುಂದುವರಿದು **ಪರಿಚ್ಛೇದ 45**ರಲ್ಲಿ 'ಅವಶ್ಯವಿದ್ದಲ್ಲಿ ಸರ್ಕಾರೇತರ ಮೂಲದಿಂದಲೂ ಪರ್ಯಾಯ ವರದಿಗಳನ್ನು ಸಮಿತಿಯು ಪಡೆಯಬಹುದು' ಎಂದು ಸೂಚಿಸಲಾಗಿದೆ.

ಇಂತಹ ವಿವರಗಳನ್ನು ಸಮಿತಿಯು ನಮ್ಮಿಂದ ಕೇಳುವ ಮೊದಲೇ ನಾವು ಸಿದ್ಧವಾಗಿದ್ದಲ್ಲಿ ಒಳಿತು. ನಮ್ಮಿಂದ ಇಡೀ ದೇಶದ ಸಮಗ್ರ ಚಿತ್ರಣ ನೀಡಲಾಗದಿದ್ದರೂ ನಮ್ಮ ನಮ್ಮ ಸಮೂಹದಲ್ಲಿ ಪರಿಸ್ಥಿತಿ ಹೇಗಿದೆ ಎಂದು ತಿಳಿಸಿದರೆ ಸಾಕು. (ದೊಡ್ಡ ತಪ್ಪಲೆಯಲ್ಲಿ ಅನ್ನ ಆಗಿದೆಯೋ ಇಲ್ಲವೋ ಎಂದು ತಿಳಿಯಲು ಒಂದೆರೆಡು ಅಗುಳನ್ನು ಮುಟ್ಟಿ ನೋಡಿದರೆ ಸಾಲದೆ !) ಇಂತಹ ಸಣ್ಣಪುಟ್ಟ ಪ್ರದೇಶಗಳ ಒಟ್ಟು ಸ್ವರೂಪ ಸರ್ಕಾರದ ವರದಿಗೆ ಪರ್ಯಾಯ ವರದಿ ಆಗಬಹುದು. ಇದೇ ಮಾಹಿತಿ ಮುಂದಿನ ವರ್ಷಗಳಲ್ಲಿ ದೇಶ, ರಾಜ್ಯ ಅಥವಾ ಚಿಕ್ಕ ಸಮುದಾಯ ಪ್ರಗತಿ ಅಥವಾ ವಿಗತಿಯನ್ನು ಹೊಂದುತ್ತಿದ್ದೇವೆಯೋ ಎಂದು ತಿಳಿದುಕೊಳ್ಳಲು ಉಪಯೋಗವಾಗುತ್ತದೆ.

ಈಗಾಗಲೇ ಭಾರತದ ಮಕ್ಕಳ ಸ್ಥಿತಿಗತಿಯ ಬಗ್ಗೆ ಏಳು ಗುಂಪುಗಳು ಪರ್ಯಾಯ ವರದಿಗಳನ್ನು ತಯಾರಿಸಿ ಸಮಿತಿಗೆ ತಲುಪಿಸಿವೆ. ಅವು 1.ಸಿ.ಎ.ಸಿ.ಎಲ್.; 2.ಬಟರ್‌ಫ್ಲೈ ; 3.ದುಡಿಯುವ ಮಕ್ಕಳ ವರದಿ; 4.ಯುವ, ಎಚ್.ಆರ್.ಎಫ್. ಮತ್ತು ಲಯ; 5.ಇಂಟರ್ ನ್ಯಾಷನಲ್ ಹ್ಯೂಮನ್ ರೈಟ್ಸ ಅಸೋಸಿಯೇಶನ್ ಆಫ್ ಅಮೇರಿಕನ್ ಮೈನಾರಿಟೀಸ್ (ಜಮ್ಮು ಮತ್ತು ಕಾಶ್ಮೀರದ ಮಕ್ಕಳ ಸ್ಥಿತಿಗತಿ ಬಗ್ಗೆ); 6. ಹ್ಯೂಮನ್ ರೈಟ್ಸ್ ವಾಚ್ ಮತ್ತು 7. ಅಂಬೇಡ್ಕರ್ ಸೆಂಟರ್ ಫಾರ್ ಜಸ್ಟೀಸ್ ಅಂಡ್ ಪೀಸ್. ಇಂತಹ ಪರ್ಯಾಯ ವರದಿಗಳು ರಾಜ್ಯ, ಜಿಲ್ಲೆ, ತಾಲ್ಲೂಕು, ಹೋಬಳಿ ಮಟ್ಟಗಳಲ್ಲಿ ಸಿದ್ಧವಾದಾಗ ಮಾತ್ರ ಮಕ್ಕಳಿಗೆ ಹಕ್ಕುಗಳು ತಲುಪಿವೆಯೋ ಇಲ್ಲವೋ ಎಂಬುದು ಸ್ಪಷ್ಟವಾಗುತ್ತದೆ.

# ಆರೋಗ್ಯವೇ ಭಾಗ್ಯ



ಬದುಕುವ ಹಕ್ಕಿದೆ ಎಂದಾಗ ಹುಟ್ಟುವ ಮಗುವನ್ನು ಹೊಟ್ಟೆಯಲ್ಲೇ ಕೊಲ್ಲಬಾರದು. ಹುಟ್ಟಿದ ಮೇಲೆ ಆರೋಗ್ಯಪೂರ್ಣವಾಗಿ ಬೆಳೆಯಬೇಕು ಎಂಬುದನ್ನು ಗಮನಿಸಿದ್ದೀರಿ.

## ಆರೋಗ್ಯ

ಬದುಕಿದ್ದರೆ ಆರೋಗ್ಯವೂ ಮುಖ್ಯ. ಮಕ್ಕಳು ಆರೋಗ್ಯಕರವಾಗಿ ಬದುಕುವುದಕ್ಕೆ ಅವರಿಗೆ ಹಲವಾರು ಸೌಲಭ್ಯಗಳು ಬೇಕೇ ಬೇಕು. ಈ ಕೆಳಗೆ ನೀಡಿರುವ ಒಂದೇ ಅನುಚ್ಛೇದದಲ್ಲಿ ಹಲವಾರು ವಿಷಯಗಳು ಅಡಗಿವೆ.



24

### ಆರೋಗ್ಯದ ರಕ್ಷಣೆ

ಯಾವುದೇ ಮಗುವಿಗೆ ಎಂತಹುದೇ ಸಂದರ್ಭದಲ್ಲಿ ಆರೋಗ್ಯ ಸೇವೆಯನ್ನು ನಿರಾಕರಿಸಕೂಡದು. ಪ್ರತಿಯೊಂದು ಮಗುವಿಗೂ ಅವಶ್ಯವಾದಾಗ ಅತ್ಯುತ್ತಮವಾದ ಆರೋಗ್ಯ ಹೊಂದುವ ಹಕ್ಕು ಇದೆ. ಎಲ್ಲ ಸರ್ಕಾರಗಳು ಈ ಹಕ್ಕನ್ನು ಮಕ್ಕಳಿಗೆ ಕೊಡಮಾಡಲು ಕೆಲವು ನಿರ್ದಿಷ್ಟ ಕ್ರಮಗಳನ್ನು ಕೈಗೊಳ್ಳಲೇಬೇಕು.

- ಶಿಶುಮರಣ ಹಾಗೂ ಐದು ವರ್ಷದೊಳಗಿನ ಮಕ್ಕಳ ಮರಣ ಸಂಖ್ಯೆ ಕಡಿಮೆಗೊಳಿಸುವುದು.
- ಎಲ್ಲೆಡೆಯಲ್ಲಿಯೂ (ಪ್ರತಿಹಳ್ಳಿಯಲ್ಲಿಯೂ) ಪ್ರಾಥಮಿಕ ಆರೋಗ್ಯ ಕೇಂದ್ರಗಳು ಇದ್ದು ಎಲ್ಲ ಮಕ್ಕಳಿಗೂ ಆರೋಗ್ಯ ಸೇವೆ ಹತ್ತಿರದಲ್ಲೇ ದೊರಕುವಂತೆ ಮಾಡುವುದು.
- ಅಪೌಷ್ಟಿಕತೆ ಹಾಗೂ ಅಶುದ್ಧ ನೀರಿನ ಬಳಕೆಯಿಂದಾಗಿ ಹರಡಬಹುದಾದ ರೋಗಗಳ ತಡೆಗೆ ಕ್ರಮ. ಎಲ್ಲೆಡೆಯೂ ಸಾಕಷ್ಟು ಪೌಷ್ಟಿಕ ಆಹಾರದ ಪೂರೈಕೆಯಾಗುವಂತೆ ಸೂಕ್ತ ತಂತ್ರಜ್ಞಾನದ ಬಳಕೆ.
- ಗರ್ಭಿಣಿಯರಿಗೆ ಹಾಗೂ ಬಾಣಂತಿಯರಿಗೆ ಸೂಕ್ತವಾದ ಆರೋಗ್ಯ ಸೇವೆ.
- ಹೆರಿಗೆ ಸಮಯದಲ್ಲಿ ತರಬೇತಿ ಹೊಂದಿದ ದಾದಿಯರ ಸೇವೆ. ಹುಟ್ಟಿದ ಮಗುವಿಗೆ ಮೊಲೆಹಾಲನ್ನು ಕನಿಷ್ಠ ಎರಡು ವರ್ಷಗಳ ಕಾಲ ಕುಡಿಸಲು ಪ್ರಚೋದಿಸುವುದು ಮತ್ತು ಸಮುದಾಯದಲ್ಲಿ ಎಲ್ಲರಿಗೂ ಆರೋಗ್ಯ ಮತ್ತು ಪೌಷ್ಟಿಕ ಆಹಾರದ ಬಗ್ಗೆ ಶಿಕ್ಷಣ ಹಾಗೂ ತರಬೇತಿ ನೀಡುವುದು ಆಗಬೇಕು.
- ಉತ್ತಮ ಆರೋಗ್ಯಕರ ಕುಟುಂಬಗಳನ್ನು ಹೊಂದಲು ನೆರವಾಗುವ ಕುಟುಂಬ ಯೋಜನೆ, ಕೌಟುಂಬಿಕ ಜೀವನ ಕುರಿತಂತೆ ಶಿಕ್ಷಣ, ಮಾಹಿತಿ ನೀಡಬೇಕು.

  ಮಕ್ಕಳ ಆರೋಗ್ಯ ರಕ್ಷಣೆಯ ಹೆಸರಿನಲ್ಲಿ ನಡೆಯುವ ಕೆಲವು ಅವೈಜ್ಞಾನಿಕ ಪದ್ಧತಿ, ವಿಧಾನಗಳನ್ನು ತಡೆಗಟ್ಟಲು ಪ್ರಯತ್ನ ಸಾಗಬೇಕಿದೆ. ಭಟ್ಟ, ಚಟಕಿ ಇತ್ಯಾದಿಗಳಿಂದ ಮಕ್ಕಳ ಆರೋಗ್ಯಕ್ಕೆ, ಜೀವಕ್ಕೆ ಅಪಾಯ ಆಗಬಹುದು.

  ಆರೋಗ್ಯ ವರ್ಧನೆಗಾಗಿ ರಾಷ್ಟ್ರೀಯ, ಅಂತರಾಷ್ಟ್ರೀಯ ಮಟ್ಟದ ಸಂಶೋಧನೆ, ತಂತ್ರಜ್ಞಾನಗಳ ಬಳಕೆಗೆ ರಾಷ್ಟ್ರಗಳು ಮುಂದಾಗಬೇಕು.

★ ಶಿಶು ಮರಣ, ಮಕ್ಕಳ ಮರಣದ ಬಗ್ಗೆ ವಿವರವಾಗಿ 15ನೇ ಪುಟದಲ್ಲಿ ಚರ್ಚಿಸಲಾಗಿದೆ.

| | ಭಾರತ | | ಕರ್ನಾಟಕ | |
|---|---|---|---|---|
| | IMR | U5MR | IMR | U5MR |
| 1999 | 79 | 124 | 74 | 90 |
| 2000 | 50 | 70 | < 50 | < 54 |

❖ IMR - Infant Mortality Rate - ಶಿಶು ಮರಣ ಪ್ರಮಾಣ.

❖ U5MR - Under 5 Mortality Rate - 5 ವರ್ಷದೊಳಗಿನ ಮಕ್ಕಳ ಮರಣ ಪ್ರಮಾಣ (ಹುಟ್ಟಿದ ಪ್ರತಿ ಸಾವಿರ ಮಕ್ಕಳಿಗೆ)



ಕಾನೂನು

- ಭಾರತದ ಸಂವಿಧಾನ : ಮಕ್ಕಳಿಗೆ ಅತ್ಯುತ್ತಮವಾದ ಆರೋಗ್ಯ ವ್ಯವಸ್ಥೆಯ ಸೌಲಭ್ಯವನ್ನು ಸರ್ಕಾರ ನೀಡಬೇಕು. ಅವರು ಮಾನಸಿಕವಾಗಿ ಹಾಗೂ ದೈಹಿಕವಾಗಿ ವಿಕಾಸ ಹೊಂದಲು ಅವಕಾಶಗಳನ್ನು ಸೃಷ್ಟಿಸಬೇಕು. ಕಲಂ 39(ಎಫ್)
- **ರೋಗ ನಿರೋಧಕ ಚುಚ್ಚುಮದ್ದು ಕಾನೂನು** (Vaccination Act 1880): 6 ತಿಂಗಳಿಂದ 14 ವರ್ಷದೊಳಗಿನ ಗಂಡುಮಕ್ಕಳಿಗೆ ಮತ್ತು 8 ವರ್ಷದೊಳಗಿನ ಹೆಣ್ಣು ಮಕ್ಕಳಿಗೆ ಕಡ್ಡಾಯವಾಗಿ ರೋಗ ನಿರೋಧಕ ಮದ್ದುಗಳನ್ನು ಕೊಡಿಸಬೇಕು.
- **ಪರ್ಯಾಯ ಶಿಶು ಆಹಾರ, ಹಾಲು ಹಾಗೂ ಹಾಲು ಕುಡಿಸಿದ ಶೀಶೆ ಕಾನೂನು** (Infant Milk Substitution Feeding Bottles and Infant food Act 1992): ಶಿಶುಗಳಿಗೆ ತಾಯಿ ಮೊಲೆ ಹಾಲು ಸೂಕ್ತವಾದ ಆಹಾರ ಎಂಬುದನ್ನು ಪ್ರಚಾರ ಪಡಿಸಲು ಹಾಲು ಮತ್ತು ಶಿಶು ಆಹಾರದ ಪರ್ಯಾಯ ತಯಾರಿಕೆಗಳನ್ನು ಉತ್ಪಾದಿಸುವುದು, ಪ್ರಚಾರ ಮತ್ತು ಸರಬರಾಜು ಮಾಡುವುದನ್ನು ಇದು ನಿಯಂತ್ರಿಸುತ್ತದೆ.



ಕ್ರಿಯೆ

**2.1**

- ನಿಮ್ಮ ಸಮುದಾಯದಲ್ಲಿ (ಹಳ್ಳಿ/ಕೊಳಗೇರಿ) ಪ್ರಾಥಮಿಕ ಆರೋಗ್ಯ ಕೇಂದ್ರ(PHC) ಇದೆಯೆ ? ಎಷ್ಟು ದೂರದಲ್ಲಿದೆ? ಅಲ್ಲಿ ಸಿಗುವ ಸೌಲಭ್ಯಗಳು ಯಾವುವು ? ಅದರ ಸೌಕರ್ಯ ಎಲ್ಲರಿಗೂ ದೊರಕುತ್ತಿದೆಯೆ?
- ನಿಮ್ಮ ಸಮುದಾಯದ ಜನ ಕುಡಿಯುವ ನೀರು ಹೇಗಿದೆ ? ಎಲ್ಲಿಂದ ಬರುತ್ತದೆ ? ನೀರಿನಿಂದ ಹರಡುವ ಕಾಲರಾ, ಇತ್ಯಾದಿ ರೋಗಗಳ ಪ್ರಕರಣಗಳು ವರ್ಷಕ್ಕೆ ಎಷ್ಟು ಬಾರಿ ಸಂಭವಿಸುತ್ತವೆ ?
- ನಿಮ್ಮ ಸಮುದಾಯದ ಜನರಿಗೆ ಸಾರ್ವಜನಿಕ ನ್ಯಾಯ ಬೆಲೆ ಅಂಗಡಿಯಲ್ಲಿ ಏನೇನು ಸಿಗುತ್ತದೆ ? ನಿರ್ವಹಿಸುತ್ತಿರುವವರು ಯಾರು ? ತಿಂಗಳಿಗೊಮ್ಮೆ ಕ್ರಮವಾಗಿ ಪಡಿತರ ವಿತರಣೆ ಆಗುತ್ತಿದೆಯೆ ? ಅದರ ಗುಣಮಟ್ಟ ಹೇಗಿದೆ ?
- ಈ ವಿವರಗಳನ್ನು ಬರೆದು ಇತರರೊಡನೆ ಹಂಚಿಕೊಳ್ಳಿ.

**2.2**

- ಮಗು ಹುಟ್ಟಿದ ಮೇಲೆ ತಾಯ ಮೊಲೆ ಹಾಲನ್ನು ಹೊರಗೆ ಚೆಲ್ಲದೆ ಅದನ್ನು ಮಗುವಿಗೇ ಕುಡಿಸಬೇಕು. ಏಕೆ? ತಿಳಿದುಕೊಳ್ಳಿ.
- ಹುಟ್ಟಿದ ಮಗುವಿಗೆ ಮೊಟ್ಟ ಮೊದಲ ಬಾರಿಗೆ ತಾಯ ಮೊಲೆ ಹಾಲು ಮಾತ್ರ ಕುಡಿಸಿದ ಪ್ರಕರಣಗಳು ಎಷ್ಟಿವೆ?
- ಎರಡು ವರ್ಷದವರೆಗೆ ಮಗುವಿಗೆ ತಾಯ ಮೊಲೆ ಹಾಲು ಏಕೆ ಕುಡಿಯಬೇಕು ?
- ಮಕ್ಕಳ ಆರೋಗ್ಯ ನಿಮಿತ್ತವೆಂದು ಅನುಸರಿಸುತ್ತಿರುವ ಅವೈಜ್ಞಾನಿಕ ಪದ್ಧತಿಗಳ ಬಗ್ಗೆ ತಿಳಿದಿರುವುದನ್ನು ಇತರರೊಂದಿಗೆ ಹಂಚಿಕೊಳ್ಳಿ.
- ಹುಟ್ಟಿದ ಮಗು ಕನಿಷ್ಠ 2.5 ಕೆ.ಜಿ. ತೂಕವಿರಬೇಕು. ನಿಮ್ಮ ಸಮುದಾಯದಲ್ಲಿ ಹುಟ್ಟಿದ 100 ಮಕ್ಕಳ ತೂಕದ ಸರಾಸರಿ ನೋಡಿ ಒಂದು ವಿಶ್ಲೇಷಣೆ ನೀಡಿ.



26

## ಸಾಮಾಜಿಕ ಭದ್ರತೆ

1. ರಾಷ್ಟ್ರೀಯ ಕಾನೂನುಗಳನ್ವಯ ಸಾಮಾಜಿಕ ಭದ್ರತೆ ಹಾಗೂ ಸಾಮಾಜಿಕ ವಿಮೆಯ ಸಂಪೂರ್ಣ ಉಪಯೋಗ ಮಕ್ಕಳಿಗೆ ದೊರಕಬೇಕು. ಹಾಗೆ ದೊರಕಿಸಲಿರುವ ವ್ಯವಸ್ಥೆಗಳ ಸಂಪೂರ್ಣ ಪರಿಚಯ ಸ್ಥಳೀಯ ಸರ್ಕಾರಿ ನೌಕರರು ಮತ್ತು ಕಾರ್ಯಕರ್ತರಿಗೆ ಇರಬೇಕು.
2. ಇದು, ಮಗು ಇರುವ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಹಿನ್ನೆಲೆಯನ್ನು ಅನುಸರಿಸಿದ್ದು, ಮಗುವಿನ ಶ್ರೇಯೋಭಿವೃದ್ಧಿಗೋಸ್ಕರವೇ ಈ ರೀತಿಯ ಭದ್ರತೆಯ ಹಣವನ್ನು ಬಳಸಬೇಕು.



ಕಾನೂನು

- ಈ ಕುರಿತು ಯಾವುದೇ ವಿಶೇಷ ಕಾನೂನು ನಿರ್ದೇಶನವಿಲ್ಲ. ಕೇಂದ್ರ ಹಾಗೂ ರಾಜ್ಯ ಸರಕಾರಗಳ ಹಲವಾರು ಯೋಜನೆ, ಕಾರ್ಯಕ್ರಮಗಳಡಿಯಲ್ಲಿ ಬೀದಿ ಮಕ್ಕಳಿಗೆ ರಾತ್ರಿ ತಂಗುದಾಣ ಮತ್ತು ಹೆಣ್ಣು ಮಕ್ಕಳಿಗೆ ಆಶ್ರಯದಾನಿಗಳಿಗೆ ಸಹಾಯ, ದೇಣಿಗೆಯುಂಟು. ರಾಜ್ಯ ಸರ್ಕಾರಗಳು ಎಲ್ಲೆಡೆ ಮಕ್ಕಳ ಕೇಂದ್ರಗಳನ್ನು ನಡೆಸುತ್ತಿವೆ. ಆದರೆ ಅವುಗಳ ಗುಣಮಟ್ಟ, ಉಪಯುಕ್ತತೆಯ ಬಗ್ಗೆ ಸರ್ಕಾರದ ಮಟ್ಟದಲ್ಲಿ ಚಿಂತನೆಗಳು ಆಗಬೇಕಿದೆ.

**2.3**



ಕ್ರಿಯೆ

- ನಿಮ್ಮ ಸಮುದಾಯದಲ್ಲಿರುವ ಮಕ್ಕಳ ಬೆಳವಣಿಗೆ ಕಂಡುಕೊಳ್ಳಲು ಐ.ಸಿ.ಡಿ.ಎಸ್. ನವರು ಬಳಸುವ ಕೋಷ್ಟಕವನ್ನು ಬಳಸಿ ತಾಳೆ ಹಾಕಿ. ಹೀಗೆ ಮಾಡಿದಾಗ ಎಷ್ಟು ಮಕ್ಕಳು ವಯಸ್ಸಿಗೆ ಅನುಗುಣವಾದ ತೂಕಕ್ಕಿಂತ ಹೆಚ್ಚು ಅಥವಾ ಕಡಿಮೆ ಇದ್ದಾರೆ ಎಂದು ತಿಳಿಯುತ್ತದೆ. ಎಲ್ಲ ಮಕ್ಕಳ ಬೆಳವಣಿಗೆಯನ್ನು ಪ್ರತಿ ಆರು ತಿಂಗಳಿಗೊಮ್ಮೆ ನೋಡಿದಾಗ ನಿಮ್ಮ ಪ್ರದೇಶದಲ್ಲಿ ಅಪೌಷ್ಟಿಕತೆಯ ಸಮಸ್ಯೆಯ ಗಂಭೀರತೆ ಎಷ್ಟೆಂದು ತಿಳಿಯುತ್ತದೆ.
- ಈ ಮುಂದಿನದನ್ನು ಅಪೌಷ್ಟಿಕತೆಯಿರುವ ಮಕ್ಕಳಲ್ಲಿ ಗಮನಿಸಿ:

| | |
|---|---|
| ಹೊಟ್ಟೆಯಲ್ಲಿ ಹುಳುಗಳು | ಶ್ವಾಸಕೋಶದ ಸಮಸ್ಯೆ |
| ವಾಂತಿ-ಭೇದಿ | ದೃಷ್ಟಿದೋಷ |
| ಶ್ರವಣ ದೋಷ | ಕೈಕಾಲುಗಳಲ್ಲಿ ನಿಶ್ಶಕ್ತಿ |
| ಮಾನಸಿಕ ಅಸ್ವಸ್ಥತೆ | ಪ್ರೋಟೀನುಗಳ ಕೊರತೆ |
| ರಕ್ತದಲ್ಲಿ ಕಬ್ಬಿಣಾಂಶದ ಕೊರತೆ | ಅಯೋಡಿನ್ ಕೊರತೆ |

- ನಿಮ್ಮ ಪ್ರದೇಶದಲ್ಲಿ ಐ.ಸಿ.ಡಿ.ಎಸ್.ನವರು ಅಂಗನವಾಡಿಗಳಲ್ಲಿ ನೀಡುತ್ತಿರುವ ಪೌಷ್ಟಿಕ ಆಹಾರದ ಪ್ರಯೋಜನದ ಬಗ್ಗೆ ನಿಮ್ಮ ಟೀಕೆ/ವಿಮರ್ಶೆ ಏನು?
- ನಿಮ್ಮಲ್ಲಿ ಓಆರ್‌ಎಸ್ (Oral Rehydration Solution-ಜೀವ ದ್ರಾವಣ)- ಉಪಯೋಗದ ಮಟ್ಟ ಹೇಗಿದೆ?
- ಸಾಮಾಜಿಕ ಭದ್ರತೆ ಮತ್ತು ಸಾಮಾಜಿಕ ಜೀವವಿಮೆಯ ಬಗ್ಗೆ ನಿಮ್ಮ. ಸಮುದಾಯದಲ್ಲಿರುವ ಕಲ್ಪನೆಗಳೇನು? ಇಂತಹ ಯಾವ ಯೋಜನೆಗಳು ನಿಮಗೆ ತಿಳಿದಿದೆ ?

ಉದಾ : ನಿಮ್ಮ ಮಗಳು ನಿಮ್ಮ ಶಕ್ತಿ.



27 ವಿಧಿ

## ಸೂಕ್ತ ಜೀವನಮಟ್ಟ

1. ಪ್ರತಿಯೊಂದು ಮಗುವಿಗೆ ದೈಹಿಕ, ಮಾನಸಿಕ, ಧಾರ್ಮಿಕ, ನೈತಿಕ ಹಾಗೂ ಸಾಮಾಜಿಕ ಅಭಿವೃದ್ಧಿಗೆ ಬೇಕಾದ ಜೀವನಮಟ್ಟವನ್ನು ಹೊಂದುವ ಹಕ್ಕು ಇದೆ. ತಮ್ಮ ಸಾಮರ್ಥ್ಯದ ಪರಿಧಿಗಳೊಳಗೆ ಇವುಗಳನ್ನು ಮಕ್ಕಳಿಗೆ ಒದಗಿಸುವುದು ಪೋಷಕರ ಕರ್ತವ್ಯ. ಮಕ್ಕಳಿಗೆ ತಕ್ಕ ಮಟ್ಟಿಗೆ ಆಹಾರ, ಬಟ್ಟೆ, ವಸತಿ, ಆರೋಗ್ಯ, ಸೇವೆ ಒದಗಿಸುವಂತೆ ಸರ್ಕಾರ ಸಹಕರಿಸಬೇಕು.

2. ಆಕಸ್ಮಾತ್ ತಂದೆ-ತಾಯಿಯರು ಮಗುವಿನಿಂದ ಬೇರ್ಪಟ್ಟಿದ್ದಲ್ಲಿ ಅಥವಾ ಹೊರದೇಶಕ್ಕೆ ಹೋದಲ್ಲಿ ಅಂಥವರ ಮಗುವಿನ ನಿರ್ವಹಣೆಗೆ ಬೇಕಾದ ಖರ್ಚನ್ನು ಅವರಿಂದ ವಸೂಲಿ ಮಾಡುವುದು ಅತ್ಯಾವಶ್ಯಕ. ಇಂಥ ಕ್ರಮಕ್ಕೆ ಅಗತ್ಯವಾದ ರಾಷ್ಟ್ರೀಯ ಅಂತಾರಾಷ್ಟ್ರೀಯ ಕಾನೂನು ನಿಯಮಗಳನ್ನು ಸರ್ಕಾರಗಳು ಗಂಭೀರವಾಗಿ ಪರಿಗಣಿಸಬೇಕು.



ಕಾನೂನು

◆ ಭಾರತದ ಸಂವಿಧಾನ : ಕಲಂ 47 : ಭಾರತದ ಎಲ್ಲ ಪ್ರಜೆಗಳ ಪೌಷ್ಟಿಕ ಮಟ್ಟವನ್ನು ಹೆಚ್ಚಿಸಬೇಕು. ಜೀವನಮಟ್ಟದ ಸುಧಾರಣೆ ಆಗಬೇಕು. ಸಾರ್ವಜನಿಕ ಆರೋಗ್ಯ ವ್ಯವಸ್ಥೆಯ ಸುಧಾರಣೆ ಎಲ್ಲೆಡೆ ಆಗಬೇಕು.



ಅಭ್ಯಾಸ

2.4

- ನಿಮ್ಮಲ್ಲಿ ಉದ್ಯೋಗ ಭರವಸೆಯ ಕಾನೂನು ಜಾರಿಯಲ್ಲಿದೆಯೆ ? ಅದರಿಂದ ಯಾರಿಗೆ ಲಾಭವಾಗುತ್ತಿದೆ? ಅದರ ಫಲವನ್ನು ಮಕ್ಕಳಿಗೆ ತಲುಪಿಸುವುದು ಹೇಗೆ ?



30

ಚರ್ಚೆ

## ಮೂಲ ನಿವಾಸಿಗಳು ಮತ್ತು ಅಲ್ಪಸಂಖ್ಯಾತರು

**ಮೂಲನಿವಾಸಿಗಳು, ಧಾರ್ಮಿಕ ಅಥವಾ ಭಾಷಾ ಅಲ್ಪಸಂಖ್ಯಾತರು ಇದ್ದಲ್ಲಿ ಅವರ ಮಕ್ಕಳಿಗೆ ಅವರ ಧರ್ಮ, ಆಚಾರ, ವಿಚಾರ, ಸಂಸ್ಕೃತಿ, ಭಾಷೆಯ ಬಳಕೆಗೆ ಯಾವುದೇ ಅಡ್ಡಿ ಆತಂಕಗಳಿರಬಾರದು. ಇದನ್ನು ನೋಡಿಕೊಳ್ಳುವ ಜವಾಬ್ದಾರಿ ಸರಕಾರದ್ದು.**



ಕಾನೂನು

◆ ಭಾರತದ ಸಂವಿಧಾನ : ಕಲಂ 29(1) ಭಾರತದ ಎಲ್ಲ ಪ್ರಜೆಗಳಿಗೆ ತಮ್ಮದೇ ಆದ ವಿಶಿಷ್ಟವಾದ ಭಾಷೆ, ಅಕ್ಷರ ಮತ್ತು ಸಂಸ್ಕೃತಿಯನ್ನು ಹೊಂದಿರುವ ಅವಕಾಶ ನೀಡುವುದು.

ಕಲಂ 25-ನಿಮಗೊಪ್ಪಿದ ಧರ್ಮವನ್ನು ಪಾಲಿಸುವ, ಆಚರಿಸುವ ಮತ್ತು ಪ್ರಚಾರ ಮಾಡುವ ಅವಕಾಶ ನೀಡುವುದು.

ಕಲಂ 28(3)-ಧಾರ್ಮಿಕ ಅಲ್ಪ ಸಂಖ್ಯಾತರಿಗೆ ಧಾರ್ಮಿಕ ಕೇಂದ್ರಗಳನ್ನು ಭೇಟಿ ಮಾಡುವ ಮತ್ತು ಅಲ್ಪಸಂಖ್ಯಾತರ ಶಿಕ್ಷಣ ಸಂಸ್ಥೆಗಳಲ್ಲಿ ಧಾರ್ಮಿಕ ಪೂಜೆ ಪುನಸ್ಕಾರಗಳಿಗೆ ಅವಕಾಶ ಕೊಡುವುದು.



ಅಭ್ಯಾಸ

2.5

- ನಿಮ್ಮ ಸಮುದಾಯದಲ್ಲಿ ಯಾವ ಯಾವ ಮೂಲನಿವಾಸಿಗಳಿದ್ದಾರೆ ? ಅದೇ ರೀತಿ ಧಾರ್ಮಿಕ, ಭಾಷಾ ಅಲ್ಪಸಂಖ್ಯಾತರು ಇದ್ದಾರೇನು ?
- ಅವರಿಗೆ ಅವರದೇ ಭಾಷೆಯಲ್ಲಿ ಕಲಿಯಲು ಅವಕಾಶವಿದೆಯೆ ?
- ನಿಮ್ಮ ಪ್ರದೇಶದಲ್ಲಿ ಇರಬಹುದಾದ ತಮಿಳು, ತೆಲುಗು, ಉರ್ದು, ಮಲಯಾಳಂ, ಮರಾಠೀ, ಹಿಂದೀ ಶಾಲೆಗಳ ಪರಿಸ್ಥಿತಿ ಹೇಗಿದೆ ? ಅದನ್ನು ಗಮನಿಸಿ ಆ ಬಗ್ಗೆ ಸಂಬಂಧಪಟ್ಟ ಶಿಕ್ಷಣ ಇಲಾಖೆಗೆ ವರದಿ ಮಾಡಿ.
- ಮೂಲನಿವಾಸಿಗಳನ್ನು ನಿರ್ವಸಿತರನ್ನಾಗಿಸಿದಾಗ ಅಥವಾ ಸ್ಥಳಾಂತರ ಮಾಡಿದಾಗ ಅವರ ಮಕ್ಕಳ ಬದುಕಿನ ಮೇಲೆ ಅದು ಹೇಗೆ ಪರಿಣಾಮ ಬೀರುವುದು ಗಮನಿಸಿ.
- ಮೂಲನಿವಾಸಿಗಳಿಗೆ ನೀಡಿರುವ ಸೌಲಭ್ಯಗಳು. ಉದಾ : ಐ.ಟಿ.ಡಿ.ಎ ಶಾಲೆಗಳು, ವಸತಿ, ಕುಡಿಯುವ ನೀರಿನ ಸೌಲಭ್ಯ, ಕೌಶಲ್ಯತೆ ತರಬೇತಿ, ಇತ್ಯಾದಿಯ ಗುಣಮಟ್ಟ ಹೇಗಿದೆ ಪರಿಶೀಲನೆ ವರದಿ ಮಾಡಿ.



32 ಪರಿಚ್ಛೇದ

## ಬಾಲಕಾರ್ಮಿಕರು

ತಮ್ಮ ಆರೋಗ್ಯ ಮತ್ತು ಜೀವಕ್ಕೆ ಅಪಾಯ ತಂದೊಡ್ಡಬಹುದಾದ ಯಾವುದೇ ಕೆಲಸ ಮಾಡದಂತೆ ಮಕ್ಕಳನ್ನು ರಕ್ಷಿಸಬೇಕು. ಯಾವುದೇ ಕೆಲಸಕ್ಕೆ ಸೇರಲು ಕನಿಷ್ಠ ವಯೋಮಿತಿಯನ್ನು ಗೊತ್ತುಪಡಿಸಬೇಕು.(ಹೆಚ್ಚಿನ ವಿವರ ಮುಂದಿನ ಲೇಖನದಲ್ಲಿ).

◆ ಶೋಷಿತರ ರಕ್ಷಣೆ ಲೇಖನದಲ್ಲಿ ನೋಡಿ.



ಕಾನೂನು



ಅಭ್ಯಾಸ

**2.6**

- ನಿಮ್ಮ ಕ್ಷೇತ್ರದಲ್ಲಿ ಯಾವ ಉದ್ದಿಮೆ/ಉದ್ಯೋಗಗಳಲ್ಲಿ ಮಕ್ಕಳು ದುಡಿಯುತ್ತಿದ್ದಾರೆ ?

  ಉದಾ : ರೇಷ್ಮೆ ಉದ್ದಿಮೆಯ ವಿವಿಧ ಹಂತಗಳು, ಬಾರ್, ಹೊಟೇಲು, ಹತ್ತಿಗಿರಣಿ, ಭತ್ತದ ಗಿರಣಿ, ಮನೆಗೆಲಸ, ಅಂಗಡಿ, ಕಟ್ಟಡ, ಕೃಷಿ, ಎಣ್ಣೆ, ಸಕ್ಕರೆ ಕೈಗಾರಿಕೆ, ಚಿಂದಿ ಆಯುವುದು ಇತ್ಯಾದಿ.
- ಯಾವ ಕೆಲಸ ಮಾಡಿದರೆ ಎಂತಹ ಆರೋಗ್ಯ ಸಮಸ್ಯೆ ಉಂಟಾಗುತ್ತದೆ/ಉಂಟಾಗಿದೆ, ಪಟ್ಟಿ ಮಾಡಿ.

  ಉದಾ : ಹತ್ತಿ ಗಿರಣಿ - ಕ್ಷಯ, ಉಸಿರಾಟದ ತೊಂದರೆ

  ರೇಷ್ಮೆ : ಕೈಹುಣ್ಣು, ಹೆಣ್ಣುಮಕ್ಕಳಿಗೆ ಅಕಾಲ ಋತುಸ್ರಾವ

  ಹೊಟೇಲ್ : ಕಜ್ಜಿ

  ಗಣಿ : ಕ್ಷಯ, ಸಿಲಿಕೋಸಿಸ್
- ವೇಶ್ಯಾವೃತ್ತಿಗೆ ದೂಡಲ್ಪಟ್ಟ ಮಕ್ಕಳಿಗೆ ಸಿಫಿಲಿಸ್, ಏಯ್ಡ್ಸ್ (ವೇಶ್ಯಾವೃತ್ತಿಗೆ ದೂಡಲ್ಪಟ್ಟ ಮಕ್ಕಳನ್ನು ಬಾಲಕಾರ್ಮಿಕರು ಎಂದು ಇಲ್ಲಿ ಗುರುತಿಸಲಾಗಿಲ್ಲ)
- ಮಕ್ಕಳು ಕೆಲಸ ಮಾಡುವಾಗ ಸಂಭವಿಸಿದ ಅಪಘಾತಗಳು ಹಾಗೂ ಸಾವುಗಳು ಉಂಟಾದ ಪ್ರಕರಣಗಳನ್ನು ಪಟ್ಟಿ ಮಾಡಿ, ಹಿಂದಿನ ಹಾಗೂ ಮುಂದಿನ ವರ್ಷಗಳಿಗೆ ತುಲನೆ ಮಾಡಿ ನೋಡಿ.
- ಅಪಘಾತ ಅಥವಾ ಸಾವು ಕುರಿತು ಪೊಲೀಸ್ ದೂರು ನೀಡಿದ್ದಲ್ಲಿ ಅದರ ಫಲಿತಾಂಶ ತಿಳಿ.



33 ಪರಿಚ್ಛೇದ

## ಮಾದಕ ದ್ರವ್ಯಗಳಿಂದ ದೂರವಿರುವುದು

ಮಾದಕ ವಸ್ತುಗಳು (ಬೀಡಿ ಸಿಗರೇಟ್ ಸೇರಿದಂತೆ ಯಾವುದೇ ರೀತಿಯ ಭ್ರಾಮಕ ಜಗತ್ತನ್ನು ಸೃಷ್ಟಿಸುವ ವಸ್ತುಗಳು) ಮಕ್ಕಳಿಗೆ ಸಿಗದಂತೆ ಎಚ್ಚರ ವಹಿಸಬೇಕು. ಇಂತಹ ವಸ್ತುಗಳನ್ನು ಮಕ್ಕಳಿಗೆ ನೀಡುವುದು, ಮಾರುವುದು, ಅವುಗಳ ತಯಾರಿಕೆಯಲ್ಲಿ, ಸಾಗಾಣಿಕೆಯಲ್ಲಿ ಮಕ್ಕಳನ್ನು ತೊಡಗಿಸುವುದನ್ನು ಅಪರಾಧ ಎಂದು ಪರಿಗಣಿಸಿ ಸರ್ಕಾರ ತೀಕ್ಷ್ಣ ಕ್ರಮ ಕೈಗೊಳ್ಳಬೇಕು.









- ಮಕ್ಕಳಿಗೆ ನ್ಯಾಯ ಕಾನೂನು (J.J.Act-1986) ಸೆಕ್ಷನ್ 43ರಂತೆ ವೈದ್ಯರ ಸಲಹೆಯಂತೆ ಮಗುವಿನ ಆರೋಗ್ಯ ಅಥವಾ ಚಿಕಿತ್ಸೆಯ ಉದ್ದೇಶಕ್ಕಾಗಿ ಅಲ್ಲದೆ ಮಕ್ಕಳಿಗೆ ಮಾದಕ ವಸ್ತುಗಳು, ಪಾನೀಯಗಳನ್ನು ಕೊಡುವವರಿಗೆ, ಪ್ರಚೋದಿಸುವವರಿಗೆ ಮೂರು ತಿಂಗಳುಗಳ ಕಾಲ ಕಾರಾಗೃಹ ಮತ್ತು ದಂಡ ವಿಧಿಸಲಾಗುವುದು.
- **ಮಾದಕ ವಸ್ತುಗಳು ಮತ್ತು ಭ್ರಾಮಕಾರಕ ವಸ್ತುಗಳ ಕಳ್ಳಸಾಗಣೆ ತಡೆ ಕಾನೂನು** (The Prevention of Illicit Traffic in Narcotic Drugs & Psychotropic Substances Act-1988): ಮಾದಕ ವಸ್ತುಗಳು ದೇಶದಲ್ಲಿ ದೊರೆಯಬಾರದು. ಯಾರಿಗೂ (ಮಕ್ಕಳಿಗೆ) ಅವುಗಳ ವಶದಲ್ಲಿ ಬೀಳುವಂತೆ ಆಗಬಾರದು ಎಂದು ಈ ಕಾನೂನು ಹೇಳುವುದು.

**2.7**



- ನಿಮ್ಮ ಕಾರ್ಯಕ್ಷೇತ್ರದಲ್ಲಿ ಮಕ್ಕಳು ಮಾದಕ ವಸ್ತುಗಳನ್ನು ಸೇವಿಸುತ್ತಿರುವರೆ ? ಅಂತಹ ಎಷ್ಟು ಪ್ರಕರಣಗಳು ನಿಮಗೆ ಗೊತ್ತು ? ಬಳಸುತ್ತಿರುವ ಮಾದಕವಸ್ತು ಯಾವುದು ? 'ಸಲ್ಯೂಷನ್' ಎಂದು ಕರೆಯಲ್ಪಡುವ ವಸ್ತು ಅವರಿಗೆ ಎಲ್ಲಿ, ಹೇಗೆ ಸಿಗುತ್ತಿದೆ ? ಈ ಚಟದಲ್ಲಿ ಬಿದ್ದ ಎಷ್ಟು ಮಕ್ಕಳು ಸಾವನ್ನಪ್ಪಿದ್ದಾರೆ ? ಮಕ್ಕಳನ್ನು ಈ ಚಟದಿಂದ ಬಿಡಿಸುವ ಪ್ರಯತ್ನಗಳ ವಿಚಾರ ನಿಮಗೆ ಗೊತ್ತೆ ? ಸಂಪರ್ಕಿಸಿ : ಬಾಸ್ಕೋ (BOSCO) ಮತ್ತು ನಿಮ್ಹಾನ್ಸ್, ಬೆಂಗಳೂರು.

**ಪರಿಚ್ಛೇದ 34, 35ನ್ನು ಕುರಿತು ಶೋಷಿತರ ರಕ್ಷಣೆ (ಭಾಗ 2, ಅಧ್ಯಾಯ 4 ನೋಡಿ)**



**38**

## ಯುದ್ಧ/ಸಶಸ್ತ್ರ ಸಂಘರ್ಷ :

1. **ಯಾವುದೇ ದೇಶಗಳ ನಡುವೆ ಅಥವಾ ಆಂತರಿಕವಾಗಿ ಸಶಸ್ತ್ರ ಸಂಘರ್ಷಗಳಾದಾಗ ಮಕ್ಕಳನ್ನು ಗೌರವದಿಂದ, ಮಾನವೀಯ ದೃಷ್ಟಿಯಿಂದ ನೋಡಿಕೊಳ್ಳಬೇಕು.**
2. **15 ವರ್ಷದೊಳಗಿನ ಯಾವುದೇ ಮಗು ಸಶಸ್ತ್ರ ಪಡೆಗಳಲ್ಲಿ ಸೇರದಂತೆ ಅಥವಾ ಸಶಸ್ತ್ರ ಸಂಘರ್ಷಗಳಲ್ಲಿ ಪಾಲ್ಗೊಳ್ಳದಂತೆ ನೋಡಿಕೊಳ್ಳಬೇಕು.**
3. **ಸಶಸ್ತ್ರ ಸಂಘರ್ಷಗಳು ಅನಿವಾರ್ಯವಾದಲ್ಲಿ 15ರಿಂದ 18 ವರ್ಷದೊಳಗಿನ ಯಾವುದೇ ಮಗುವನ್ನು ಸೈನ್ಯಕ್ಕೆ ಸೇರಿಸಿಕೊಳ್ಳಬಾರದು. ಹಾಗೆ ಸೇರಿಸಿಕೊಳ್ಳುವುದು ಅನಿವಾರ್ಯವಾದರೆ ಮೊದಲ ಆದ್ಯತೆ ಈ ವಯಸ್ಸಿನ ಮಕ್ಕಳಲ್ಲಿ ಹಿರಿಯ ಮಕ್ಕಳಿಗೆ ನೀಡಬೇಕು.**
4. **ಸಶಸ್ತ್ರ ದಾಳಿ, ಗಲಭೆಗಳಾದಾಗ ತೊಂದರೆಗೀಡಾದವರಿಗೆ ರಕ್ಷಣೆ ನೀಡಬೇಕಾದರೆ ಮಕ್ಕಳಿಗೆ ಬೇಕಾದ ಆರೈಕೆ, ಆಶ್ರಯಗಳಿಗೆ ಆದ್ಯತೆ ನೀಡಬೇಕು.**

ಸೇವ್ ದ ಚಿಲ್ಡ್ರನ್ ವರ್ಲ್ಡ್ ಸಂಸ್ಥೆಯ ಶ್ರೀಮತಿ ಜೆಬ್, ಯುದ್ಧಗಳಿಂದ ಅಮಾಯಕ ಮಕ್ಕಳು ಸಾಯುತ್ತಿದ್ದಾರೆ ಎಂಬ ಗಟ್ಟಿ ದನಿ ಎತ್ತಿದ್ದರು. ಇದೇ ಇಂದು ನಾವಿಲ್ಲಿ ವಿಮರ್ಶಿಸುತ್ತಿರುವ ಮಕ್ಕಳ ಹಕ್ಕುಗಳ ಒಡಂಬಡಿಕೆಯ ಹುಟ್ಟಿಗೆ ಕಾರಣವಾಯಿತು. ಇಂದಿಗೂ ಎಷ್ಟೋ ದೇಶಗಳಲ್ಲಿ ಸಿಡಿಯುತ್ತಿರುವ ಅರ್ಥಹೀನ ಯುದ್ಧಗಳಿಂದ ಮಕ್ಕಳು ಸಂಕಷ್ಟಕ್ಕೆ ಈಡಾಗುತ್ತಲೇ ಇದ್ದಾರೆ.

ಉದಾ : ಅಮೇರಿಕಾದ ಸೈನ್ಯವು, ಇರಾಕ್ ಮತ್ತು ಸ್ವಿಟ್ಜರ್‌ಲ್ಯಾಂಡ್ ಮೇಲೆ ಬಾಂಬ್ ಧಾಳಿ ಮಾಡಿದಾಗ ; 1999ರಲ್ಲಿ ಪಾಕಿಸ್ತಾನ ಭಾರತದ ಮೇಲೆ ಧಾಳಿ ಮಾಡಿದಾಗ, ಬಂಡುಕೋರರು, ಭಯೋತ್ಪಾದಕರು ವಿಧ್ವಂಸಕ ಕೃತ್ಯಗಳನ್ನು ನಡೆಸಿದಾಗ ಅನೇಕ ಮಕ್ಕಳು ತೊಂದರೆಗೀಡಾಗಿದ್ದಾರೆ. ಪಾಕಿಸ್ತಾನ ಮಕ್ಕಳ ಕೈಗೆ ಬಂದೂಕು ಕೊಟ್ಟು ಭಾರತದ ಗಡಿಯೊಳಗೆ ನುಗ್ಗಲು ಪ್ರಚೋದಿಸಿದ ವರದಿಗಳು ಬಂದಿವೆ.

ಈ ಪರಿಚ್ಛೇದವು ಮಕ್ಕಳನ್ನು ಯುದ್ಧದಲ್ಲಿ ತೊಡಗಿಸಬಾರದು, ಅಕಸ್ಮಾತ್ ಯಾವುದೇ ಧಾಳಿಯಾದಲ್ಲಿ ರಕ್ಷಣೆ ನೀಡುವಾಗ ಮೊದಲ ಆದ್ಯತೆ ಮಕ್ಕಳಿಗೆ ಎಂದು ಖಡಾಖಂಡಿತವಾಗಿ ಹೇಳುತ್ತದೆ.

- ಈ ಕುರಿತು ಭಾರತದಲ್ಲಿ ಯಾವುದೇ ವಿಶೇಷ ಕಾನೂನು ಕಟ್ಟಲೆ ಇಲ್ಲ. ಆದಾಗ್ಯೂ ಮಿಲಿಟರಿ ಶಾಲೆಗೆ ಮಕ್ಕಳನ್ನು ಸೇರಿಸುವುದು ತಪ್ಪೋ ಸರಿಯೋ ಎಂಬುದರ ಬಗ್ಗೆ ಆಗಾಗ್ಗೆ ಚರ್ಚೆಗಳು ನಡೆಯುತ್ತಿರುತ್ತವೆ.



ಕಾನೂನು



ಅಭ್ಯಾಸ

**2.8**

- ನಿಮ್ಮ ಪ್ರದೇಶದಲ್ಲಿ ಏನಾದರೂ ದೊಂಬಿ ಆದಾಗ ಅದು ಮಕ್ಕಳ ಮೇಲೆ ಎಂತಹ ಪರಿಣಾಮ ಬೀರುತ್ತದೆ ಗಮನಿಸಿದ್ದೀರಾ ?
- ಮಕ್ಕಳು ಯುದ್ಧಕ್ಕೆ ಏಕೆ ಹೋಗಬಾರದು ? ಚರ್ಚಿಸಿ.

ಮಕ್ಕಳ ಬದುಕು, ಉಳಿವು ಕುರಿತಾಗಿರುವ ಕೆಲವು ಪರಿಚ್ಛೇದಗಳ ಬಗ್ಗೆ ನೀವೀಗ ತಿಳಿದಿದ್ದೀರಿ. ಒಂದೊಂದು ಪರಿಚ್ಛೇದದ ಜೊತೆಗೆ ಅದಕ್ಕೆ ಸಂಬಂಧಪಟ್ಟಂತೆ ನೀವು ತಿಳಿಯಲೇಬೇಕಾದ ಕೆಲವು ವಿಚಾರ, ಕಾನೂನು, ಅಂಕಿ-ಅಂಶಗಳ ಬಗ್ಗೆ ಕೆಲವು ಸೂಚನೆಗಳು ಇವೆ. ಭಾರತ ಸರ್ಕಾರ, ಕರ್ನಾಟಕ ಸರ್ಕಾರ, ನಿಮ್ಮ ಸ್ಥಳೀಯ ಸರ್ಕಾರಗಳು ಆಯಾ ಮಟ್ಟದಲ್ಲಿ ಭಾರತೀಯ ಮಕ್ಕಳಿಗೆ ನೀಡಿರುವ ಮಾತನ್ನು ಉಳಿಸಿಕೊಳ್ಳಲು, ತಮ್ಮ ಒಟ್ಟು ಅಭಿವೃದ್ಧಿಯನ್ನು ಸಾಧಿಸಲು ಏನು ಮಾಡುತ್ತಿವೆ ಎಂದು ತಿಳಿಯುವ ತವಕ ತಮಗಿದ್ದಲ್ಲಿ, ಬೇಕಾದ ಮಾಹಿತಿಗಳನ್ನು ಮೊದಲು ಸ್ಥಳೀಯವಾಗಿ ಸಂಗ್ರಹಿಸಬೇಕು. ಅವುಗಳನ್ನು ಕಾಲಕಾಲಕ್ಕೆ ಒರೆ ಹಚ್ಚಿದಲ್ಲಿ ಮಕ್ಕಳ ಹಕ್ಕುಗಳ ಒಡಂಬಡಿಕೆಯಲ್ಲಿ ಸರಕಾರಗಳು ಮಾಡಿರುವ ವಾಗ್ದಾನಗಳ ನಿಜರೂಪ ತಿಳಿಯುತ್ತಾ ಹೋಗುತ್ತದೆ.

- **ನೀವೊಂದು ಸ್ವಯಂಸೇವಾ ಸಂಸ್ಥೆಯಾಗಿದ್ದಲ್ಲಿ, ಸಹಾಯ ಸಂಸ್ಥೆಯಾಗಿದ್ದಲ್ಲಿ, ಸರ್ಕಾರಿ ಇಲಾಖೆಯಾಗಿದ್ದಲ್ಲಿ ಮುಂದಿನವನ್ನು ಗಮನಿಸಿ :**

**ನಿಮ್ಮ ಕಾರ್ಯಕ್ಷೇತ್ರದಲ್ಲಿ ...**

1. **ನೀವು ಮಕ್ಕಳ ಯಾವ ಯಾವ ಉಳಿವಿನ ಅವಶ್ಯಕತೆಗಳನ್ನು ಗಮನಿಸುತ್ತಿದ್ದೀರಿ ? ಹೇಗೆ ?**
2. **ಯಾವ ಯಾವ ಅವಶ್ಯಕತೆಗಳಿಗೆ ಯಾರೂ ಗಮನ ನೀಡಿಲ್ಲ?**
3. **ಯಾವ ಕ್ರಮ, ಯಾರು ಹೇಗೆ ಕೈಗೊಳ್ಳಬೇಕು ?**

ಮಕ್ಕಳು ಉಳಿದು ಬೆಳೆದು ಬಾಳಬೇಕೆಂದರೆ ಇವು ಪ್ರಸ್ತುತವೋ ಅಲ್ಲವೋ ತಿಳಿದುಕೊಳ್ಳಿ. ಈ ಕುರಿತು ಸಂಬಂಧಿಸಿದವರೆಲ್ಲರ ಜೊತೆ ಚರ್ಚೆ ಮಾಡಿ - ಶಾಲಾ ಶಿಕ್ಷಕರು, ಅಂಗನವಾಡಿ ಕಾರ್ಯಕರ್ತೆಯರು, ವೈದ್ಯರು, ದಾದಿಯರು, ಗ್ರಂಥಪಾಲಕರು, ಸಂಘ-ಸಂಸ್ಥೆಗಳು, ಜನ ಪ್ರತಿನಿಧಿಗಳು, ಸರ್ಕಾರಿ ಉದ್ಯೋಗಿಗಳು, ಪತ್ರಕರ್ತರು ಇತ್ಯಾದಿ.

ಮುಂದೆ ಮಗುವಿನ ರಕ್ಷಣೆಯನ್ನು ಕುರಿತಾಗಿ ಸವಿವರವಾಗಿ ಚರ್ಚಿಸೋಣ.

# ತಾರತಮ್ಯತೆ, ಶೋಷಣೆ ಮತ್ತು ತುರ್ತು ಸಂದರ್ಭಗಳು

**ಹು**ಟ್ಟಿದ ಮಗು ಜೀವಂತವಾಗಿದ್ದು, ಬೆಳೆದು, ಮುಂದೆ ದೈಹಿಕವಾಗಿ, ಮಾನಸಿಕವಾಗಿ ಆರೋಗ್ಯಪೂರ್ಣವಾದ ಮಾನವ ಜೀವಿಯಾಗಬೇಕೆಂಬುದೇ ಎಲ್ಲರ ಆಶಯ. ಎಲ್ಲ ಮಕ್ಕಳಿಗೂ ಇಂತಹ ಭಾಗ್ಯ ಇರುವುದಿಲ್ಲ. ಯಾರದೋ ದುರಾಶೆಯಿಂದಾಗಿ, ಮತ್ತಾರದೋ ಲಾಲಸೆಗಾಗಿ, ಅರ್ಥಹೀನ ಪದ್ಧತಿಗಳಿಂದಾಗಿ ಮಕ್ಕಳು ತಮ್ಮದಲ್ಲದ ತಪ್ಪಿಗೆ, ತಮ್ಮ ಅರಿವಿಗೆ ಬಂದೋ ಬಾರದೆಯೋ ಕಷ್ಟ ಅನುಭವಿಸುವ ಪರಿಸ್ಥಿತಿ ಇದೆ.

ಮಕ್ಕಳ ಹಕ್ಕುಗಳ ಒಡಂಬಡಿಕೆಯ ಎರಡನೆ ಪ್ರಮುಖ ಹಕ್ಕು ಎಲ್ಲ ಮಕ್ಕಳಿಗೂ ಸಿಗಬೇಕಾದ ರಕ್ಷಣೆ. ಇದು ಮಕ್ಕಳ ದೇಹ, ಮನಸ್ಸುಗಳನ್ನು ಯಾರೂ ದುರುಪಯೋಗ ಮಾಡದಂತೆ ರಕ್ಷಿಸಲು ನೀಡಿರುವ ವಾಗ್ದಾನ. 23 ಪರಿಚ್ಛೇದಗಳಲ್ಲಿ ಹರಡಿರುವ ಇದನ್ನು ಮೂರು ವಿಭಾಗಗಳಲ್ಲಿ ಗಮನಿಸಬಹುದು..

1. **ತಾರತಮ್ಯತೆ** : ಗಂಡು-ಹೆಣ್ಣು, ಬಡವ-ಬಲ್ಲಿದ ಮಕ್ಕಳೆಂಬ, ಇಂಥಿಂಥ ಜಾತಿ, ಪ್ರದೇಶ, ತಾಯಿ-ತಂದೆಯರ ಹಿನ್ನೆಲೆ ಮುಂತಾದವುಗಳ ಕಾರಣಕ್ಕೆ ಮಕ್ಕಳು ತಾರತಮ್ಯತೆಗೆ ಗುರಿಯಾಗದಂತೆ ರಕ್ಷಿಸಬೇಕು.

2. **ಶೋಷಣೆ** : ಆರ್ಥಿಕ ಲಾಭಕ್ಕಾಗಿ ದೈಹಿಕ ತೃಪ್ತಿಗಾಗಿ ಯಾರೇ ಆಗಲಿ ಮಕ್ಕಳನ್ನು ಶೋಷಿಸುವುದರ ವಿರುದ್ಧ ರಕ್ಷಿಸಬೇಕು.

3. **ತುರ್ತು ಪರಿಸ್ಥಿತಿಗಳು** : ಮತ್ತು ಸಶಸ್ತ್ರ ಸಂಘರ್ಷಗಳಲ್ಲಿ ನೈಸರ್ಗಿಕ ಅಥವಾ ಅಸ್ವಾಭಾವಿಕ ದುರಂತಗಳಂತಹ ತುರ್ತುಪರಿಸ್ಥಿತಿಗಳಲ್ಲಿ ಮೊದಲು ಮಕ್ಕಳನ್ನು ರಕ್ಷಿಸಬೇಕು.

ಈಗ ಆಯಾ ವಿಭಾಗದಡಿ ಸೇರಿರುವ ಕೆಲವು ಪರಿಚ್ಛೇದಗಳನ್ನು ಗಮನಿಸೋಣ.

**ತಾರತಮ್ಯತೆ**



ಹೀಗೊಂದು ಹಳೆಯ ಕತೆ. ಒಬ್ಬ ಗುರುವಿದ್ದ. ಅವನ ಶಿಷ್ಯರಲ್ಲಿ ಕೆಲವರು ರಾಜಕುಮಾರರೂ ಇದ್ದರು. ಗುರು ದೊಡ್ಡ ಜ್ಞಾನಿ. ಶಿಕ್ಷಣ ಸಾಗುವಾಗ ಸಮಾನತೆ ಸಮತೆಗಳ ಬಗ್ಗೆ ರಾಜಕುಮಾರರಿಗೆ ತಿಳಿವಳಿಕೆ ನೀಡಿದರು, ಉಪದೇಶಿಸಿದರು. ಬಡವ-ಬಲ್ಲಿದ, ಮೇಲ್ಜಾತಿ-ಕೆಳಜಾತಿ, ನಗರ-ಗ್ರಾಮದ ಜನ, ಅಕ್ಷರಸ್ಥ-ಅನಕ್ಷರಸ್ಥ ಆ ದೇಶ-ಈ ದೇಶ, ಶಕ್ತ-ಅಶಕ್ತ ಎಂಬ ಭೇದಭಾವ ಮಾಡಬಾರದು ಎಂದು ಅರ್ಥಪೂರ್ಣವಾಗಿ ವಿವರಿಸಿದರು. ಬಹಳ ಜನ ರಾಜಕುಮಾರರಿಗೆ ಇವೆಲ್ಲ ಇಷ್ಟವಾಗಲಿಲ್ಲ. ಒಬ್ಬ ರಾಜಕುಮಾರ ಮಾತ್ರ ಗುರುಗಳಿಗೆ ಮಾತು ಕೊಟ್ಟ. ''ನಾನು ಪಟ್ಟಕ್ಕೆ ಬಂದಾಗ ಸಮಾನತೆ ತರಲು ಪ್ರಯತ್ನಿಸುತ್ತೇನೆ ಗುರುಗಳೆ''. ಗುರುಕುಲ ವಾಸ ಮುಗಿಸಿ ರಾಜಕುಮಾರರೆಲ್ಲ ತಮ್ಮ ತಮ್ಮ ಊರುಗಳಿಗೆ ಹಿಂದಿರುಗಿದರು.

ಹತ್ತು ವರ್ಷ ಕಳೆಯಿತು. ಮಾತು ಕೊಟ್ಟಿದ್ದ ರಾಜಕುಮಾರನಿಂದ ಅವನ ಗುರುಗಳಿಗೆ ಆಹ್ವಾನ ಬಂತು. ಗುರುಗಳು ಅವನ ಊರಿಗೆ ಹೋದರು. ರಾಜಕುಮಾರ ರಾಜನಾಗಿದ್ದ. ಗುರುಗಳಿಗೆ ಹೇಳಿದ, ''ಗುರುಗಳೆ, ಸಮಾನತೆಯ ಕೆಲಸ ಆರಂಭವಾಗಿದೆ. ಬನ್ನಿ ತೋರಿಸುತ್ತೇನೆ. ನಮ್ಮ ಶಾಲೆಯ ಆಟದ ಮೈದಾನಕ್ಕೆ ಹೋಗೋಣ.'' ಅಲ್ಲಿ ಹೋದಾಗ ಹೇಳಿದ ''ಗುರುಗಳೆ, ಈ ಶಾಲೆಯಲ್ಲಿ ಎಲ್ಲ ಜಾತಿ, ಪಂಥ, ವರ್ಗ-ವರ್ಣಗಳ ಮಕ್ಕಳೆಲ್ಲ ಒಟ್ಟಿಗೆ ಸೇರಿ ಕಲಿಯುತ್ತಾರೆ, ಆಡುತ್ತಾರೆ''. ಗುರುಗಳಿಗೆ ಬಹಳ ಆನಂದವಾಯ್ತು. ''ಬಹಳ ಒಳ್ಳೆಯದು'' ಎಂದರು. ಮೈದಾನದಲ್ಲಿ ಆಡುತ್ತಿದ್ದ ಮಕ್ಕಳತ್ತ ಇನ್ನೊಮ್ಮೆ ಕಣ್ಣು ಹಾಯಿಸಿ ಏನೋ ವಿಶೇಷವನ್ನು ಗಮನಿಸಿದವರಂತೆ ಕೇಳಿದರು, ''ಮಗೂ ! ಎಲ್ಲವೂ ಚೆನ್ನಾಗಿದೆ. ಆದರೆ ಈ ಮಕ್ಕಳು ಬೇರೆ ಬೇರೆ ಬಣ್ಣದ ಬಟ್ಟೆ ತೊಟ್ಟಿರುವುದೇಕೆ ?'' ರಾಜ ಹೆಮ್ಮೆಯಿಂದ ಉತ್ತರಿಸಿದ- ''ಇದೇ ಗುರುಗಳೆ ಇಲ್ಲಿನ ವೈಶಿಷ್ಟ್ಯ ! ಮೇಲ್ಜಾತಿಯವರಿಗೆ ಕೆಂಪು ಉಡುಪು, ಕೆಳಜಾತಿಯವರಿಗೆ ಹಸಿರು ಉಡುಪು. ಆದರೆ ಎಲ್ಲರೂ ಜೊತೆಜೊತೆಯಾಗಿ ಆಡುತ್ತಾರೆ, ಕಲಿಯುತ್ತಾರೆ !'' ಗುರುಗಳು ಕುಗ್ಗಿ ಹೋದರು. ಮತ್ತೇನೂ ಕೇಳದೆ ಮೌನವಾಗಿ ಆಶ್ರಮಕ್ಕೆ ಹಿಂದಿರುಗಿದರು.



ಚರ್ಚೆ

**3.1**

- ಈ ಕತೆಯಲ್ಲಿ ಏನು ಗಮನಿಸಿದಿರಿ ?
- ತಾರತಮ್ಯತೆ ತೊಡೆಯಿತೋ ಅಥವಾ ಉಳಿಯಿತೋ ?
- ಕತೆ ಕುರಿತು ನಿಮ್ಮೆಲ್ಲ ಚರ್ಚಿಸಿ.
- ಈಗ ನಮ್ಮ ಸುತ್ತಮುತ್ತಲಿರುವ ವ್ಯವಸ್ಥೆಗಳಲ್ಲಿ ಹೀಗಿದೆಯೋ ?

ತಾರತಮ್ಯತೆ ತೊಡೆಯುವ ಯತ್ನವನ್ನು ಮಕ್ಕಳ ಹಕ್ಕುಗಳ ಒಡಂಬಡಿಕೆ ಮಾಡುತ್ತಿದೆ. ಪರಿಚ್ಛೇದ 2, 7, 23 ಮತ್ತು 30ರಲ್ಲಿ ಈ ಯತ್ನವನ್ನು ಕಾಣಬಹುದು.

## ತಾರತಮ್ಯತೆ



2 ಪರಿಚ್ಛೇದ

**ಯಾವುದೇ ಮಗುವನ್ನು ಇತರರಿಂದ ಬೇರೆಯಾಗಿ ಪರಿಗಣಿಸಬಾರದು. ಮಗು ಮತ್ತು ಮಗುವಿನ ತಂದೆ-ತಾಯಿ, ಪೋಷಕರ ಜಾತಿ, ವರ್ಣ, ಲಿಂಗ, ಭಾಷೆ, ಪ್ರದೇಶ, ರಾಜಕೀಯ ನಿಲುವು, ಅಂಗವೈಕಲ್ಯತೆ, ಹುಟ್ಟು ನಗರ, ಗ್ರಾಮ, ಬುಡಕಟ್ಟು, ಆದಿವಾಸಿ ಹಿನ್ನೆಲೆಯಲ್ಲಿ ಆ ಮಗುವನ್ನು ಇತರ ಮಕ್ಕಳಿಂದ ಬೇರೆಯಾಗಿ ನೋಡಬಾರದು. ಎಲ್ಲ ಮಕ್ಕಳಿಗೂ ಒಂದೇ ಭಾವನೆಯಿಂದ ಬೆರೆಯಲು ಅವಕಾಶ ನೀಡಬೇಕು.**

**ತಂದೆ-ತಾಯಿಯರ ಅಥವಾ ಪೋಷಕರ ಸ್ಥಾನಮಾನ, ಸಿದ್ಧಾಂತ, ನಿಲುವುಗಳು ಅಥವಾ ನಂಬಿಕೆಗಳು ಏನೇ ಇದ್ದರೂ ಅವುಗಳ ಆಧಾರದ ಮೇಲೆ ಮಕ್ಕಳಿಗೆ ಶಿಕ್ಷೆ ಅಥವಾ ತಾರತಮ್ಯತೆ ಮಾಡುವಂತಿಲ್ಲ. ಹಾಗೇನಾದರೂ ಆದಲ್ಲಿ ಸರ್ಕಾರವು ಸೂಕ್ತ ಕ್ರಮ ಕೈಗೊಳ್ಳಬೇಕು.**



ಕಾನೂನು

- **ಭಾರತ ಸಂವಿಧಾನ** ಕಲಂ 14ರಂತೆ ಭಾರತೀಯರಿಗೆಲ್ಲ ಸಮಾನತೆಯ ಹಕ್ಕು ಇದೆ. ಕಲಂ 15ರಂತೆ ಯಾರನ್ನೂ ಧರ್ಮ, ಪಂಗಡ, ಲಿಂಗ, ಹುಟ್ಟಿದ ಸ್ಥಳ, ವಾಸಸ್ಥಳವನ್ನು ಅನುಸರಿಸಿ ತಾರತಮ್ಯತೆ ಮಾಡಬಾರದು. ಇದಕ್ಕೆ ಭಾಷೆ, ಬಣ್ಣ, ತಂದೆತಾಯಿಯರ ಉದ್ಯೋಗ ಮತ್ತು ಅಂಗವಿಕಲತೆ ಅಂಶಗಳನ್ನು ಸೇರಿಸಬೇಕಿದೆ. ಸಂಸತ್ ಅಧಿಕಾರ ಹೊಂದಿದೆ.

  ಕಲಂ 17 ರಂತೆ ಜಾತಿಯ ಹೆಸರಿನಲ್ಲಿ 'ಅಸ್ಪೃಶ್ಯತೆ' ಮಾಡಿದಲ್ಲಿ ಅದು ಅಪರಾಧ ಎಂದು ಪರಿಗಣಿಸಲಾಗುತ್ತದೆ.
- **ನಾಗರೀಕ ಹಕ್ಕುಗಳ ರಕ್ಷಣೆ ಕಾನೂನು** (Protection of Citizens Rights Act-1955) 'ಅಸ್ಪಶ್ಯತೆಯನ್ನು' ನಿಷೇಧಿಸಿದೆ.

**3.2**



ಚರ್ಚೆ

- ನಿಮ್ಮ ಪ್ರದೇಶದಲ್ಲಿ ಎಂತಹ ತಾರತಮ್ಯ, ಎಲ್ಲೆಲ್ಲಿ ಕಾಣುತ್ತಿದ್ದೀರಿ ?
- ಹಿಂದಿನ ಅನೇಕ ಅಭ್ಯಾಸಗಳಲ್ಲಿ ಮಕ್ಕಳ ಮರಣ, ವಿವಿಧ ವಯೋಮಾನದಲ್ಲಿ ಮಕ್ಕಳ ತೂಕ, ಅಂಗವೈಕಲ್ಯದ ಪ್ರಕರಣಗಳು ಎಷ್ಟಿವೆ ಎಂಬುದನ್ನು ನೋಡಿದ್ದೇವೆ. ಈ ಅತ್ಯಧಿಕ ಸಂಖ್ಯೆಯಲ್ಲಿ ಸಾಯುವ ಮಕ್ಕಳು ಯಾವ ಜಾತಿ, ವರ್ಗ, ಪಂಥ, ಪ್ರದೇಶ, ಲಿಂಗಕ್ಕೆ ಸೇರಿದವರು ಎಂಬುದನ್ನು ಗಮನಿಸಿ. ಹಿಂದಿನ ಮತ್ತು ಈಗಿನ ಪರಿಸ್ಥಿತಿ ಹೇಗಿದೆ ಎಂದು ತಿಳಿದರೆ ಮುಂದಿನ ವರ್ಷಗಳಲ್ಲಿ ಇದರ ಉಸ್ತುವಾರಿ ಮಾಡಿ ವಾಸ್ತವ ಚಿತ್ರ ನೀಡಬಹುದು.
- ತಮ್ಮದಲ್ಲದ ತಪ್ಪಿಗೆ ಮಕ್ಕಳನ್ನು ಕಳ್ಳರೆಂದು, ದೇವದಾಸಿಯರ ಮಕ್ಕಳೆಂದು, ಬುದ್ಧಿಹೀನರೆಂದು ಹೆಸರಿಟ್ಟಿರುವ ಪ್ರಸಂಗಗಳು ಇದ್ದಲ್ಲಿ ಅವುಗಳಿಂದ ಅಂಥ ಮಕ್ಕಳನ್ನು ಹೊರತರಲು ಹಾಗೂ ಇಂತಹ ದುಷ್ಟಪದ್ಧತಿಯ ನಿರ್ಮೂಲನೆಗೆ ಸಮಾಜದ ಮನ ಹೇಗೆ ಒಲಿಸಬೇಕು ಎಂಬುದನ್ನು ಚರ್ಚೆ ಮಾಡಿ.
- ಕನ್ನಡ ಮತ್ತು ಆಂಗ್ಲ ಮಾಧ್ಯಮಗಳಲ್ಲಿ ಕಲಿಯುತ್ತಿರುವವರಲ್ಲಿ ಏನಾದರೂ ವ್ಯತ್ಯಾಸವಿದೆಯೇ ? ಅದನ್ನು ಪರಿಹರಿಸುವುದು ಹೇಗೆ ?
- ವಿಕಲಾಂಗತೆಯಿರುವ ಮಕ್ಕಳು ಮುಖ್ಯವಾಹಿನಿಯಲ್ಲಿ ಸೇರಿ ಹೋಗುವುದಕ್ಕೆ ಇರುವ ವ್ಯವಸ್ಥೆಯೇನು ?
- ವಿವಿಧ ರೀತಿಯ ಮೀಸಲಾತಿಗಳು ಮತ್ತು ಅವುಗಳ ಉಪಯೋಗ ಏಕಿವೆ ? ಹೇಗೆ ಆಗುತ್ತಿದೆ ? ಚರ್ಚಿಸಿ.
- ಹೊಟೇಲುಗಳಲ್ಲಿ, ಶಾಲೆಗಳಲ್ಲಿ ಪ್ರತ್ಯೇಕ ಲೋಟ, ತಟ್ಟೆ, ಆಸನ ಈಗಲೂ ಇದೆಯೇ?



23

## ಅಂಗವಿಕಲ ಮಕ್ಕಳು

1. ಮಾನಸಿಕ ಅಥವಾ ದೈಹಿಕ ಅಂಗವಿಕಲತೆಯಿರುವ ಮಕ್ಕಳೂ ಸಹ ಎಲ್ಲರಂತೆ ಮನುಷ್ಯರೆ. ಅವರಿಗೂ ಸಹ ಅವಕಾಶಗಳನ್ನು ಇತ್ತು ಮುಂದೆ ಗೌರವದಿಂದ, ಸ್ವಾವಲಂಬಿಗಳಾಗಿ, ಜನಸಮುದಾಯಗಳೊಡನೆ ಯಾವುದೇ ತಾರತಮ್ಯತೆ ಇಲ್ಲದೆ ಬದುಕುವಂತೆ ನೋಡಿಕೊಳ್ಳಬೇಕು.
2. ಕುಟುಂಬದಲ್ಲಿ ಅಶಕ್ತ ಅಥವಾ ಅಂಗವಿಕಲ ಮಗು ಇದ್ದರೆ, ಅದು ಆ ಕುಟುಂಬವನ್ನೇ ಅಂಗವಿಕಲರನ್ನಾಗಿಸುವುದು. ಅದು ಒಂದು ರೀತಿಯಲ್ಲಿ ಆರ್ಥಿಕ, ಸಾಮಾಜಿಕ ಹೊರೆ. ಹೀಗಾಗಿ ಇಂತಹ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಸರ್ಕಾರಗಳು ತಮ್ಮ ಇತಿಮಿತಿಗಳಲ್ಲೇ ಇಂತಹ ಕುಟುಂಬಗಳು, ಅಂಗವಿಕಲ ಮಕ್ಕಳಿಗೆ ಸೌಲಭ್ಯಗಳನ್ನು ಒದಗಿಸಬೇಕು.
3. ಅಂಗವಿಕಲ ಮಕ್ಕಳು ಸಮಾಜದ ಮುಖ್ಯವಾಹಿನಿಯಲ್ಲಿ ಬೆರೆಯಬೇಕು, ತಾವೂ ಗೌರವದಿಂದ ಬಾಳಬೇಕು ಎಂಬುದು ಸುಲಭದ ಮಾತಲ್ಲ. ಅವರಿಗೆ ವಿಶೇಷ ಶಕ್ತಿ ಶುಲ್ಕ ರಹಿತ ಶಿಕ್ಷಣ ಹಾಗೂ ವೈದ್ಯಕೀಯ ಸೇವೆ, ತರಬೇತಿ, ಆಟ ಪಾಠಗಳಿಗೆ ಅವಕಾಶ, ಉದ್ಯೋಗ ಅವಕಾಶಗಳನ್ನು ಸರ್ಕಾರಗಳು ಒದಗಿಸಬೇಕು.
4. ಅಂಗವಿಕಲರಿಗೆ ಸೇವಾ ಸೌಲಭ್ಯಗಳು, ಆರೋಗ್ಯ ವ್ಯವಸ್ಥೆ, ಶಿಕ್ಷಣ, ಕೌಶಲ್ಯ ತರಬೇತಿ ಇವೆಲ್ಲವೂ ಹೇಳುವಷ್ಟು ಸುಲಭವಲ್ಲ. ಈ ಸೇವೆ ಸೌಲಭ್ಯಗಳು ಎಲ್ಲಿ, ಹೇಗೆ, ಯಾವಾಗ ಲಭ್ಯವಿದೆ ಎಂಬ ಮಾಹಿತಿಯ ಹಂಚಿಕೆ. ನಿರ್ದಿಷ್ಟ ಸೇವೆಗಳನ್ನು ನೀಡುವುದು ಬಹಳ ಮುಖ್ಯ.

- ಭಾಗ-2 ಅಧ್ಯಾಯ-1ರಲ್ಲಿ (ಪುಟ 24) ಚರ್ಚಿಸಲಾಗಿದೆ.



### 3.3



- ನಿಮಗೆ ಯಾವ ಅಂಗವೈಕಲ್ಯ ಕಾಣುತ್ತದೆ ? ಯಾವುದು ಕಾಣುವುದಿಲ್ಲ ? ಮಕ್ಕಳನ್ನು ಅವರ ಅಂಗವಿಕಲತೆಯಿಂದ ಹೆಸರಿಸುವ ಅಭ್ಯಾಸ ಇದೆಯೇ ? ಹಾಗೆ ಸದಾ ಕರೆಯುತ್ತಿದ್ದರೆ ಅಂತಹ ಮಕ್ಕಳ ಮೇಲೆ ಅದು ಎಂತಹ ಪರಿಣಾಮ ಬೀರುತ್ತದೆ ? ಚರ್ಚಿಸಿ.

  ಉದಾಹರಣೆ : ಕುಂಟ, ಲೋ ಕುರುಡ, ಏ ಮೂಗ, ಅಬೇ ಕಿವುಡ, ತೊನ್ನ, ಇತ್ಯಾದಿ. ಇದನ್ನು ತಡೆಗಟ್ಟುವುದು ಹೇಗೆ ?
- ಶಾಲೆಗೆ ಸೇರಿಸುವ ಸಂದರ್ಭದಲ್ಲಿ ಮಕ್ಕಳ ಅಂಗವಿಕಲತೆ ಅಡ್ಡಿ ಬಂದಿದೆಯೆ ? ನೀವದಕ್ಕೆ ಎಂತಹ ಪರಿಹಾರ ಕಂಡುಕೊಂಡಿದ್ದೀರಿ?
- ನಡೆಯಲು ತೊಂದರೆಯಿರುವ ಮಕ್ಕಳು ಸಾರ್ವಜನಿಕ ಪ್ರದೇಶಗಳಿಗೆ-ಶಾಲೆ, ಸಿನೆಮಾ ಮಂದಿರ, ಹೊಟೇಲ್, ಬಸ್ ನಿಲ್ದಾಣ, ಇತ್ಯಾದಿ-ಸುಲಭವಾಗಿ ಹೋಗಿ ಬರಲು ಇಳಿಜಾರಿನ ದಾರಿ (ರ್‍ಯಾಂಪ್) ಇದೆಯೆ ? ಇವು ಇಲ್ಲದಿದ್ದರೆ ಅವರು ಹೇಗೆ ಹೋಗಬೇಕು ? ಹಾಗಾದಾಗ ಅವುಗಳ ಪರಿಣಾಮ ಏನಾಗುವುದು ?
- ಯಾವುದೇ ಅಂಗವಿಕಲತೆಯಿರುವ ಮಗುವಿನ ಸಾಧನ-ಸಲಕರಣೆ, ಹಂಸಪಾದ, ಗಾಲಿ ಕುರ್ಚಿ, ಶ್ರವಣಸಾಧನ, ಕನ್ನಡಕ ಇತ್ಯಾದಿಗಳನ್ನು ಪಡೆಯಲು ಅಥವಾ ದುರಸ್ತಿ ಮಾಡಿಸಿಕೊಳ್ಳಲು ಎಷ್ಟು ದೂರ ಹೋಗಬೇಕು ? ಅಂತಹ ಸಂದರ್ಭಗಳಲ್ಲಿ ಸಾಮಾನ್ಯವಾಗಿ ಎಷ್ಟು ಖರ್ಚಾಗುತ್ತದೆ ? ಸರಬರಾಜು, ದುರಸ್ತಿ ಮಾಡುವವರು ಸರ್ಕಾರದವರೋ ಅಥವಾ ಖಾಸಗಿಯವರೋ ? (ಸ್ವಯಂ ಸೇವಾ ಸಂಸ್ಥೆಯವರನ್ನೊಳಗೊಂಡಂತೆ).
- ಮಾನಸಿಕ ಅಸ್ವಸ್ಥತೆಯ ಪ್ರಕರಣಗಳು ನಿಮ್ಮಲ್ಲಿ ಎಷ್ಟಿವೆ ? ಅವುಗಳಿಗೆ ಚಿಕಿತ್ಸೆ ಹೇಗೆ ನಡೆದಿದೆ ? ಚಿಕಿತ್ಸೆ ಎಲ್ಲಿ ಸಿಗುತ್ತದೆ ? ಮಾನಸಿಕವಾಗಿ ಅಸ್ವಸ್ಥರಾಗಿರುವ ಮಕ್ಕಳನ್ನು ಮುಖ್ಯ ವಾಹಿನಿಗೆ ತರುವ ಪ್ರಯತ್ನ ಹೇಗೆ ಸಾಗಿದೆ ?



## ಅಲ್ಪಸಂಖ್ಯಾತರ ಮಕ್ಕಳು

30

**ಪ್ರತಿಯೊಬ್ಬ ಮಗುವಿಗೂ ತನ್ನ ಮಾತೃಭಾಷೆಯಲ್ಲಿ ಮಾತನಾಡುವ, ಕಲಿಯುವ, ಮೂಲ ನಿವಾಸಿಗಳು, ಭಾಷಾ ಅಲ್ಪಸಂಖ್ಯಾತರು, ಗಿರಿಜನರ ಮಕ್ಕಳಿಗೆ ಅವರವರ ಸಮುದಾಯದೊಡನೆ ಒಡನಾಡುವ, ಬದುಕುವ, ತಮ್ಮ ಧಾರ್ಮಿಕ, ಸಾಂಸ್ಕೃತಿಕ ವಿಚಾರಗಳನ್ನು ಅನುಸರಿಸುವ ಹಕ್ಕು ಇದೆ.**



- **ಭಾರತದ ಸಂವಿಧಾನ** ಕಲಂ 29(1) ಭಾರತೀಯರಿಗೆಲ್ಲ ತಮ್ಮ ದೇಶದ ವೇಷ, ಭಾಷೆ, ಲಿಪಿ, ಸಂಸ್ಕೃತಿಯನ್ನು ಹೊಂದಿರಲು ಅವಕಾಶ ನೀಡುವುದು.

  ಕಲಂ 25-ಭಾರತೀಯರೆಲ್ಲರಿಗೂ ತಮ್ಮ ಧರ್ಮವನ್ನು ಪರಿಪಾಲಿಸುವ, ಪ್ರಚಾರ ಪಡಿಸುವ, ಸ್ವಾತಂತ್ರ್ಯವಿದೆ.

  ಕಲಂ 28(3)ರ ಪ್ರಕಾರ ಕೆಲವು ಶಿಕ್ಷಣ ಸಂಸ್ಥೆಗಳಲ್ಲಿ ಧಾರ್ಮಿಕ ಕ್ರಿಯೆ ಪ್ರಾರ್ಥನೆ ನಡೆಸುವ, ಧಾರ್ಮಿಕ ಸಂಸ್ಥೆಗಳಿಗೆ ಭೇಟಿಕೊಡುವ ಸ್ವಾತಂತ್ರ್ಯವಿದೆ.



### 3.4

- ನಿಮ್ಮ ಪ್ರದೇಶದಲ್ಲಿ ಯಾರನ್ನು ಅಲ್ಪಸಂಖ್ಯಾತರೆಂದು ಗುರುತಿಸಲಾಗಿದೆ ? ಅವರ ಜನಸಂಖ್ಯೆ ಎಷ್ಟು ? ಕಷ್ಟ ಸುಖಗಳೇನು? ಅವರಿಗೆ ವೈಯಕ್ತಿಕ ಕಾನೂನು ನಿಯಮಗಳು ಇವೆಯೆ ? ಅವುಗಳ ಸಾಧಕ-ಬಾಧಕಗಳೇನು ?
- ಮೂಲ ನಿವಾಸಿಗಳ ಹಿತಾಸಕ್ತಿಗೆ ಯಾರಿಂದ ಧಕ್ಕೆ ಬರುತ್ತಿದೆ ? ಹೇಗೆ ? ಪ್ರತಿಭಟನೆ ವ್ಯಕ್ತವಾಗಿದೆಯೆ ?

  ಉದಾ : ನಾಗರಹೊಳೆ ಅರಣ್ಯದಲ್ಲಿ ರಾಷ್ಟ್ರೀಯ ಉದ್ಯಾನವನ ಹಾಗೂ ತಾಜ್ ಗುಂಪಿನ ಹೊಟೇಲ್ ನಿರ್ಮಾಣದ ಪ್ರಸ್ತಾವನೆ ಬಂದಾಗ ಅದರ ಮೂಲ ನಿವಾಸಿಗಳು ಅದನ್ನೇಕೆ ಪ್ರತಿಭಟಿಸಿದರು ? ತಿಳಿದುಕೊಳ್ಳಿ.
- ಅಲ್ಪ ಸಂಖ್ಯಾತರು ಹಾಗೂ ಮೂಲ ನಿವಾಸಿಗಳಿಗೆ ಏನಾದರೂ ಮೀಸಲಾತಿ ಇದೆಯೆ ? ಅವುಗಳ ಉಪಯೋಗ/ ಅನುಪಯೋಗ /ದುರುಪಯೋಗದ ಪರಿಚಯ ನಿಮಗಿದೆಯೆ ?

ಮಕ್ಕಳ ಹಕ್ಕುಗಳಲ್ಲಿ ತಾರತಮ್ಯತೆಯ ವಿರುದ್ಧ ರಕ್ಷಣೆಯ ಹಕ್ಕಿನಲ್ಲಿ ತಿಳಿಸಲಾಗಿದೆ. ಮುಂದೆ ಶೋಷಣೆಯ ವಿರುದ್ಧ ರಕ್ಷಣೆ ಬಗ್ಗೆ ತಿಳಿಯೋಣ.

ತಾರತಮ್ಯತೆಯ ಚಾರಿತ್ರಿಕ ಹಿನ್ನೆಲೆ ನಿಮಗೆ ತಿಳಿಯಬೇಕೆಂದರೆ ಇರುವ ಸಮಾಜದ ವಿಶ್ಲೇಷಣೆ, ಚರಿತ್ರೆ, ಭೂಹಂಚಿಕೆ, ಅಧಿಕಾರ ಹಂಚಿಕೆ, ಜ್ಞಾನದ ಪ್ರಸರಣ ಇವುಗಳ ವಿಶ್ಲೇಷಣೆ ಆಗಬೇಕು. ಯಾವ ಸಮುದಾಯ ಯಾರ ಮೇಲೆ ದಬ್ಬಾಳಿಕೆ ಮಾಡುತ್ತಿದೆ ? ಯಾವ ಕಾರಣಕ್ಕಾಗಿ ಈ ದಬ್ಬಾಳಿಕೆ ನಿಲ್ಲಿಸಬೇಕು ? ಇದರಲ್ಲಿ ಶಿಕ್ಷಣ, ಜನಸಂಖ್ಯಾ ನಿಯಂತ್ರಣ ಲಭ್ಯವಿರುವ ಸಂಪನ್ಮೂಲಗಳ ಬಳಕೆ ಹೇಗೆ ಆಗಬೇಕು ? ಹೆಣ್ಣು ಮಕ್ಕಳಿಗೆ ಎಂತಹ ಸ್ಥಾನ ಮಾನ ಇದೆ ಎಂಬುದೂ ಸೇರಬೇಕು. ಇವುಗಳ ವಿವರವಾದ ಪರಿಚಯವಾದಲ್ಲಿ ಮಕ್ಕಳ ತಾರತಮ್ಯತೆಯ ಬಗ್ಗೆ ತಿಳಿಯಲು ಸಾಧ್ಯ. ಇಂಥ ತಾರತಮ್ಯತೆಗೆ ಅವರು ಬಲಿಯಾಗದಂತೆ ರಕ್ಷಿಸಲು ಆಗ ಸಹಾಯವಾಗುತ್ತದೆ.

ನೀವೊಂದು ಸ್ವಯಂಸೇವಾ ಸಂಸ್ಥೆಯಾಗಿದ್ದಲ್ಲಿ, ಸಹಾಯ ಸಂಸ್ಥೆಯಾಗಿದ್ದಲ್ಲಿ, ಸರ್ಕಾರಿ ಇಲಾಖೆಯಾಗಿದ್ದಲ್ಲಿ ಮುಂದಿನದನ್ನು ಗಮನಿಸಿ.

ನಿಮ್ಮ ಕಾರ್ಯಕ್ಷೇತ್ರದಲ್ಲಿ

1. ತಾರತಮ್ಯತೆಗೆ ಮಕ್ಕಳು ಗುರಿಯಾಗುತ್ತಿರುವುದನ್ನು ನೀವು ಎಲ್ಲೆಲ್ಲಿ ಗಮನಿಸಿದ್ದೀರಿ ? ಹಾಗಾಗಲು ಏನು ಕಾರಣ?
2. ಈ ತಾರತಮ್ಯತೆಯ ನಿವಾರಣೆಗೆ ಯಾರು ಕ್ರಮ ಕೈಗೊಳ್ಳಬೇಕು ?
3. ಎಲ್ಲೆಲ್ಲಿ ಮಕ್ಕಳಿಗೆ ಸಹಾಯ/ರಕ್ಷಣೆ ದೊರಕಿದೆ ? ಅದರ ಪರಿಣಾಮವೇನು ?
4. ಎಲ್ಲಿ ಇಂತಹ ಸಹಾಯ ದೊರಕಿಲ್ಲ ? ಅದರ ಪರಿಣಾಮವೇನು ?

# ಶೋಷಿತರ ರಕ್ಷಣೆ !



ಆಗಾಗ ಪತ್ರಿಕೆಗಳಲ್ಲಿ ನೀವು ಕೆಲವೊಂದು ಸುದ್ದಿಗಳನ್ನು ನೋಡಿರಬಹುದು. 'ಮಕ್ಕಳ ಅಪಹರಣ ಮತ್ತು ಮಾರಾಟ'; 'ಮಂತ್ರಿಗಳ ಮನೆಯಲ್ಲಿ ದುಡಿಯುವ ಬಾಲಕಿಯ ಬವಣೆ'; 'ವೇಶ್ಯಾವಾಟಿಕೆಗಳಲ್ಲಿ ನೂರಾರು ಬಾಲಕಿಯರು'; 'ರಾಜ್ಯದಲ್ಲಿ 34 ಲಕ್ಷ ಬಾಲಕಾರ್ಮಿಕರು, ಇದರಲ್ಲೂ ಅರ್ಧಕ್ಕೂ ಹೆಚ್ಚು ಜನ ಅಪಾಯಕಾರಿ ಉದ್ದಿಮೆಗಳಲ್ಲಿ'; 'ಮಾದಕ ವಸ್ತು ಸಾಗಣಿಕೆಯಲ್ಲಿದ್ದ 12 ಬಾಲಕರ ಬಂಧನ' ಇತ್ಯಾದಿ. ಇವೆಲ್ಲವೂ ಶೋಷಣೆಗೆ ಒಳಗಾದ ಮಕ್ಕಳ ಕತೆಗಳು. ನೀವೂ ಸಹ ಇಂತಹ ನೂರಾರು ಪ್ರಸಂಗಗಳನ್ನು ನಿಮ್ಮ ಸುತ್ತಮುತ್ತ ಗಮನಿಸಿರಬಹುದು.

ಪತ್ರಿಕೆಗಳಲ್ಲಿ ಬಂದ ಸುದ್ದಿಗಳು ಅಥವಾ ಎದುರಾಗಿರಬಹುದಾದ ಇಂತಹ ಪ್ರಕರಣಗಳನ್ನು ಇಟ್ಟುಕೊಂಡು ಚರ್ಚೆ ಮಾಡಿ. ಅನಂತರ 'ಶೋಷಿತರೆಂದರೆ ಯಾರು ?' ಈ ವಿಚಾರವನ್ನು ಮುಂದಿಟ್ಟುಕೊಂಡು ಅಂತಹವರ ಒಂದು ಪಟ್ಟಿ ಮಾಡಿ. ಈ ಹಿಂದೆ ಹೇಳಿದಂತೆ 'ಬೇರೆಯವರ ಆರ್ಥಿಕ ಲಾಭಕ್ಕಾಗಿ, ದೈಹಿಕ ತೃಪ್ತಿಗಾಗಿ ದುಡಿತ ಅಥವಾ ಕಠಿಣ ಪರಿಶ್ರಮ ಅಥವಾ ಅನೈತಿಕ ವ್ಯವಹಾರದಲ್ಲಿ ಯಾರನ್ನು ತೊಡಗಿಸಲಾಗುತ್ತದೋ ಅವರು ಶೋಷಣೆಗೆ ಒಳಗಾದವರು!

ಈ ಕುರಿತು ಮಕ್ಕಳ ಹಕ್ಕುಗಳ ಹಲವು ಪರಿಚ್ಛೇದಗಳು ಸಾಕಷ್ಟು ಬೆಳಕು ಚೆಲ್ಲಿವೆ. (10, 11, 16, 19, 20, 21, 25, 32, 34, 35, 36, 37, 39, 40). ಈಗಾಗಲೇ ಇವುಗಳಲ್ಲಿರುವ ಅನೇಕ ಪರಿಚ್ಛೇದಗಳ ಬಗ್ಗೆ ಹಿಂದಿನ ಲೇಖನಗಳಲ್ಲಿ ಚರ್ಚಿಸಲಾಗಿದೆ.



## ಪೋಷಕರೊಂದಿಗಿರುವ ಹಕ್ಕು

10 ಪರಿಚ್ಛೇದ

1. ಯಾವುದಾದರೂ ಮಗು ಅಥವಾ ಮಕ್ಕಳ ತಾಯಿ-ತಂದೆಯರು ಬೇರೆ ಬೇರೆ ದೇಶದಲ್ಲಿದ್ದು, ತಾವು ಒಟ್ಟಿಗೆ ಇರುವ ಉದ್ದೇಶದಿಂದ ದೇಶದಿಂದ ದೇಶಕ್ಕೆ ಹೋಗಲು ಅಥವಾ ಬರಲು ಅನುಮತಿ ಕೋರಿ ಅರ್ಜಿ ಸಲ್ಲಿಸಿದಾಗ ಅಂತಹ ಅರ್ಜಿಗಳನ್ನು ಸರಕಾರಗಳು ಆದಷ್ಟು ಬೇಗ ವಿಲೇವಾರಿ ಮಾಡಬೇಕು. ಹಾಗೆ ಮಾಡುವ ಸಂದರ್ಭದಲ್ಲಿ ಈ ರೀತಿಯ ಅನುಮತಿ, ಕೂಡುವಿಕೆಯಿಂದ ಮಗುವಿಗೆ, ಪೋಷಕರಿಗೆ ಅಥವಾ ಒಟ್ಟೂ ಕುಟುಂಬಕ್ಕೆ ಯಾವುದೇ ರೀತಿಯ ಅನಾನುಕೂಲ/ಪ್ರತಿಕೂಲ ಪರಿಣಾಮಗಳು ಆಗುವುದಿಲ್ಲ ಎಂದು ಖಚಿತಪಡಿಸಿಕೊಳ್ಳಬೇಕು.

2. ಮಗುವಿನ ತಂದೆ-ತಾಯಿಗಳು ಬೇರೆ ಬೇರೆ ದೇಶಗಳಲ್ಲಿದ್ದಲ್ಲಿ, ಮಗುವಿಗೆ ತನ್ನ ತಂದೆ-ತಾಯಿಯರ ಜೊತೆ ಸಂಬಂಧ ಸಂಪರ್ಕವಿಟ್ಟುಕೊಳ್ಳುವ ಹಕ್ಕಿರುತ್ತದೆ. ಹೀಗೆ ಬೇರೆ ಬೇರೆ ಸಂದರ್ಭಗಳಲ್ಲಿ ತಂದೆ-ತಾಯಿ ಅಥವಾ ಮಗು ತನ್ನ ಸ್ವಂತ ದೇಶ ಬಿಟ್ಟು ಅನ್ಯ ದೇಶಕ್ಕೆ ಹೋಗಲು ಸರ್ಕಾರಗಳು ಅನುಮತಿ ನೀಡಬೇಕು. ಇಲ್ಲಿ ಗಮನಿಸಬೇಕಾದ ವಿಚಾರ : ಹೀಗೆ ದೇಶ ಬಿಟ್ಟು ದೇಶಕ್ಕೆ ಹೋಗುವಾಗ ಆಯಾ ದೇಶದ ಸುಭದ್ರತೆ, ಸಾರ್ವಜನಿಕ ಶಿಸ್ತು, ಆರೋಗ್ಯ, ನೈತಿಕ ಮೌಲ್ಯಗಳು ಹಾಗೂ ಇತರ ಸಾರ್ವಜನಿಕರ ಹಕ್ಕುಗಳ ಉಲ್ಲಂಘನೆ ಆಗದ ಸಂದರ್ಭಗಳಲ್ಲಿ ಮಾತ್ರ, ಇದನ್ನು ಮಾನ್ಯ ಮಾಡಲಾಗುವುದು.

## ಕಾನೂನಿಗೆ ವಿರುದ್ಧವಾಗಿ ಸ್ಥಳಾಂತರವಾಗದಿರುವುದು

11 ಪರಿಚ್ಛೇದ

1. ಯಾವುದೇ ಮಗುವನ್ನು ಸರಿಯಾದ ವಿಧಿ ವಿಧಾನಗಳಿಲ್ಲದೆ ಸರಕಾರ, ನ್ಯಾಯಾಲಯ, ಪೋಷಕರ ಒಪ್ಪಿಗೆ ಇಲ್ಲದೆ ಒಂದೆಡೆಯಿಂದ ಇನ್ನೊಂದೆಡೆಗೆ (ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ, ಒಂದು ದೇಶದಿಂದ ಮತ್ತೊಂದು ದೇಶಕ್ಕೆ) ಅಕ್ರಮ ವರ್ಗಾವಣೆ, ಅದಲು-ಬದಲು ಮಾಡಬಾರದು. ಹಾಗೆ ಆಗಿದ್ದಲ್ಲಿ ಸರ್ಕಾರ ಅಂತಹ ಮಕ್ಕಳನ್ನು ಹಿಂದಕ್ಕೆ ಕರೆತರುವ ಕ್ರಮ ಕೈಗೊಂಡು, ಅಕ್ರಮಕ್ಕೆ ಕಾರಣವಾದವರ ಮೇಲೆ ಕಠಿಣ ಕ್ರಮ ಕೈಗೊಂಡು ಇಂತಹ ಪ್ರಸಂಗಗಳು ಮರುಕಳಿಸದಂತೆ ನೋಡಿಕೊಳ್ಳಬೇಕು.

2. ಇದಕ್ಕಾಗಿ ಸರ್ಕಾರಗಳು ದ್ವಿಪಕ್ಷೀಯ ಅಥವಾ ಬಹುಪಕ್ಷೀಯ ಒಪ್ಪಂದಗಳನ್ನು ಮಾಡಿಕೊಳ್ಳಬೇಕು ಮತ್ತು ಈಗಿರುವ ಕಾನೂನು, ಒಪ್ಪಂದಗಳಿಗೆ ಸೂಕ್ತ ಮಾರ್ಪಾಡು ಮಾಡಬೇಕು.



ಕಾನೂನು

- ಈ ಕುರಿತು ನಮ್ಮ ದೇಶದಲ್ಲಿ ಯಾವುದೇ ವಿಶೇಷ ಕಾನೂನು ಇಲ್ಲ. ಭಾರತೀಯ ದಂಡ ಸಂಹಿತೆ (Indian Penal Code 1860)ಯಲ್ಲಿ (ವ್ಯಕ್ತಿ) ಅಪಹರಣ ಪ್ರಕರಣ ಬಿಟ್ಟರೆ ಬೇರೆ ವಿಚಾರವಿಲ್ಲ.

ಇಂತಹ ಪ್ರಸಂಗಗಳು ನಿಮ್ಮ ಸಮುದಾಯದ ಪರಿಸರದಲ್ಲಿ ನಿಮ್ಮ ಕಣ್ಣಿಗೆ ಬಿದ್ದಿವೆಯೇ ? ನಿಮ್ಮ ಹಳ್ಳಿ, ಕೊಳೆಗೇರಿ ಅಥವಾ ಬಡಾವಣೆಗಳಿಂದ ಆಗಾಗ ಮಕ್ಕಳು ದಿಢೀರ್ ಎಂದು ಕಣ್ಮರೆಯಾಗುವ ಪ್ರಸಂಗಗಳು ಎಷ್ಟಿವೆ ? ಕೆಲವೊಮ್ಮೆ ಮಕ್ಕಳು ತಾವೇ ಓಡಿಹೋಗಿರಬಹುದು ಅಥವಾ ಬೇರೆಯವರ ಪ್ರಲೋಭನೆ/ಪ್ರಚೋದನೆಯಿಂದ ಓಡಿಹೋಗಿರಬಹುದು. ಇನ್ನೂ ಕೆಲವು ಪ್ರಸಂಗಗಳಲ್ಲಿ ಮಕ್ಕಳ ಮಾರಾಟವೂ ಆಗಿರಬಹುದು. ಈ ಎಲ್ಲವೂ ಸಹ ಶೋಷಣೆಯ ವಿವಿಧ ರೂಪಗಳು.

ಕೆಲವು ದಿನಗಳ ಹಿಂದೆ (ಸೆಪ್ಟೆಂಬರ್ 1999) ಬಾಲಕಿಯೊಬ್ಬಳು ಬೆಂಗಳೂರಿನ ಅನಾಥಾಶ್ರಮದಿಂದ ಒಬ್ಬ ಮಂತ್ರಿಯ ಮನೆಗೆ ಹೋದ ಬಗ್ಗೆ ವರದಿ ಬಂದಿತ್ತು. 10 ವರ್ಷದ ಬಾಲಕಿಯನ್ನು ಆಕೆಯ ಸಂಬಂಧಿಗಳಿಗೆ ತಮ್ಮಿಂದ ಸಾಕಲು ಸಾಧ್ಯವಾಗದೆ ಬೆಂಗಳೂರಿನ ಅನಾಥಾಶ್ರಮಕ್ಕೆ ಓದು ಬರಹ ಕಲಿತು ಬಾಳು ಬೆಳಗಿಸಿಕೊಳ್ಳಲಿ ಎಂದು ಸೇರಿಸಿದ್ದರು. ಕೆಲ ದಿನದ ನಂತರ ಬಾಲಕಿಯನ್ನು ನೋಡಲು ಹೋದ ಅವರಿಗೆ ಅಚ್ಚರಿ ಕಾದಿತ್ತು. ಮಗು ಅಲ್ಲಿಲ್ಲ ! ಯಾರದೋ ಮನೆಗೆ ದತ್ತು ನೀಡಿರುವುದಾಗಿ ಅನಾಥಾಶ್ರಮದವರು ಹೇಳಿದರು. ಮತ್ತೆ ಮತ್ತೆ ಕೆದಕಿ ಕೇಳಿದಾಗ ತಿಳಿದಿದ್ದು ಆಗಿನ ರಾಜ್ಯಸರ್ಕಾರದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವೆಗೆ 'ದತ್ತು' ನೀಡಲಾಗಿದೆ ಎಂದು. ಮಗುವಿನ ಸಂಬಂಧಿಗಳು ತಾವು 'ದತ್ತು' ನೀಡಲು ಒಪ್ಪಿಗೆ ನೀಡಿರಲಿಲ್ಲ ಎಂದು ಗದ್ದಲ ಮಾಡಿದಾಗ ಮಗುವನ್ನು ಹಿಂದಕ್ಕೆ ಕರೆಸಿ ಒಪ್ಪಿಸಲಾಯಿತು. ಸಚಿವೆ ಹೇಳಿದ್ದು ತನಗೆ ದತ್ತು ತೆಗೆದುಕೊಳ್ಳುವ ಉದ್ದೇಶವಿಲ್ಲ, ದತ್ತು ಬಗ್ಗೆ ತಿಳಿದಿಲ್ಲ ಎಂದು. ಮಗುವನ್ನು ಮಾತನಾಡಿಸಿದಾಗ ಅವಳು ಹೇಳಿದ್ದು, 'ತಾನು ಆ ಮಂತ್ರಿಗಳ ಮನೆಯಲ್ಲಿ ಕಸ-ಮುಸುರೆ ಮಾಡಿ, ಅಲ್ಲಿ ಪುಟ್ಟಮಕ್ಕಳನ್ನು ಆಡಿಸುತ್ತಿದ್ದೆ. ಶಾಲೆಗೆ ಹೋಗಲಿಲ್ಲ.'

**4.1**



ಚಟುವಟಿಕೆ

- ನಿಮಗೆ ಈ ವರದಿ ಓದಿದಾಗ ಏನನ್ನಿಸುತ್ತದೆ ?
- ಮಗುವನ್ನು ಒಂದೆಡೆಯಿಂದ ಇನ್ನೊಂದೆಡೆಗೆ ಹೇಗೆ ವರ್ಗಾಯಿಸಲಾಯಿತು ?
- ಇಲ್ಲಿ ಮಗುವಿನ ಯಾವ ಯಾವ ಹಕ್ಕುಗಳ ಉಲ್ಲಂಘನೆ ಆಗಿದೆ ?
- ದತ್ತು ನೀಡುವಾಗ ಒಂದು ಸಂಸ್ಥೆ ಕೈಗೊಳ್ಳಬೇಕಾದ ನಿಯಮಗಳು ಹೇಗೆ ಗಾಳಿಗೆ ತೂರಲ್ಪಟ್ಟಿದೆ?

ಈ ಹಿನ್ನೆಲೆಯಲ್ಲಿ ಪರಿಚ್ಛೇದ 11ನ್ನು ಮತ್ತೆ ನೋಡಿದಾಗ, ಅದಕ್ಕೆ ಕೇವಲ ಬೇರೆ ಬೇರೆ ದೇಶಗಳಲ್ಲ, ಒಂದೇ ದೇಶದೊಳಗೆ ಹಾಗೂ ಒಂದೇ ರಾಜ್ಯದೊಳಗೆ, ಒಂದೇ ಜಿಲ್ಲೆಯಲ್ಲಿ ಕೂಡಾ ಹೇಗೆ ಅನಧಿಕೃತವಾಗಿ ಮಕ್ಕಳ ಸಾಗಣೆ ಆಗಬಾರದು ಎಂಬುದು ಸ್ಪಷ್ಟವಾಗುತ್ತದೆ.



16 ವಿಧಿ

## ಸ್ವಕೀಯತೆಯ ರಕ್ಷಣೆ

1. ಎಲ್ಲರಿಗೂ ಖಾಸಗಿ ಬದುಕನ್ನು ಹೊಂದುವ ಹಕ್ಕು ಇದೆ. ಇದು ಮಕ್ಕಳಿಗೂ ಸಹ ಅನ್ವಯಿಸುತ್ತದೆ. ಮಕ್ಕಳ, ಅವರ ಕುಟುಂಬದ ಖಾಸಗಿ ಬದುಕಿನಲ್ಲಿ, ಪತ್ರ ವ್ಯವಹಾರಗಳಲ್ಲಿ ಅಕ್ರಮವಾಗಿ ಯಾರೂ ಹಸ್ತಕ್ಷೇಪ ಮಾಡಬಾರದು, ಅವರ ಕೌಟುಂಬಿಕ ಗೌರವಗಳಿಗೆ ಧಕ್ಕೆ ಬರಬಾರದು.
2. ಒಂದು ವೇಳೆ ಹೀಗೆ ಆದಲ್ಲಿ ಕಾನೂನಿನ ರಕ್ಷಣೆ ಪಡೆಯುವ ಹಕ್ಕು ಮಕ್ಕಳಿಗಿದೆ.



19 ವಿಧಿ

## ಲೈಂಗಿಕ ದುರುಪಯೋಗವಾಗದಂತೆ ರಕ್ಷಣೆ

1. ಸಾಮಾನ್ಯವಾಗಿ ಮಕ್ಕಳು ತಂದೆ, ತಾಯಿ ಅಥವಾ ಪೋಷಕರು ಅಥವಾ ಅವರ ಪೋಷಣೆಯ ಹೊಣೆ ಹೊತ್ತ ಬೇರೆಯವರ ರಕ್ಷಣೆಯಲ್ಲಿ ಇರುತ್ತಾರೆ. (ಯಾವುದೇ ನಿರ್ದಿಷ್ಟ ಪೋಷಕರು ಇಲ್ಲದಿದ್ದರೆ ಅಂತಹವರು ಆಯಾ ರಾಜ್ಯದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ನಿರ್ದೇಶನಾಲಯದ ನಿರ್ದೇಶಕರ ಪೋಷಣೆಯಲ್ಲಿರುತ್ತಾರೆ ಎಂಬುದು ನಿಮಗೆ ತಿಳಿದಿರಲಿ) ಅಂತಹ ಜವಾಬ್ದಾರಿ ತೆಗೆದುಕೊಂಡಿರುವವರು ಮಗುವನ್ನು ನಿರ್ಲಕ್ಷಿಸಿದರೆ, ಮಾನಸಿಕ ಅಥವಾ ದೈಹಿಕ, ಲೈಂಗಿಕ ಶೋಷಣೆ (ದೂಷಣೆ, ವರ್ತನೆ) ಮಾಡಿದರೆ, ಅಂತಹ ಮಕ್ಕಳ ರಕ್ಷಣೆಗೆ ಸೂಕ್ತ ಕಾನೂನುಗಳ ನೆರವು ಸಿಗಲೇಬೇಕು.
2. ಹೀಗೆ ಶೋಷಣೆ ಆಗದಂತೆ ಕ್ರಮ ಕೈಗೊಳ್ಳುವುದರ ಜೊತೆ ಜೊತೆಗೆ ಶೋಷಣೆಗೆ ಒಳಗಾದ ಮಕ್ಕಳನ್ನು ರಕ್ಷಿಸಲು, ಹಾಗೂ ಅವರ ಜವಾಬ್ದಾರಿ ತೆಗೆದುಕೊಳ್ಳಲು ಮುಂದೆ ಬರುವವರಿಗೆ ಸೂಕ್ತ ಸಹಾಯ, ಸೌಲಭ್ಯ ಒದಗಿಸಲು ಸರ್ಕಾರ ನಿರ್ದಿಷ್ಟ ಸಾಮಾಜಿಕ ಕಾರ್ಯಕ್ರಮಗಳು, ಚಿಕಿತ್ಸೆಯನ್ನು ಒದಗಿಸಬೇಕು.



- ಮಕ್ಕಳಿಗೆ ನ್ಯಾಯ ಕಾನೂನು (Juvenile Justice Act-1986)ರ ಸೆಕ್ಷನ್ 36ರ ವ್ಯಾಪ್ತಿಯಲ್ಲಿ ಬರುವ ಯಾವುದೇ ಮಗುವಿನ ಗುರುತನ್ನು ಹೇಳಬಹುದಾದ ಹೆಸರು, ವಿಳಾಸ, ಶಾಲೆ ಅಥವಾ ಚಿತ್ರವನ್ನು ಪ್ರಕಟಿಸಬಾರದು. ಅವರಿಗೆ ತಮ್ಮ ಖಾಸಗಿ ಬದುಕನ್ನು ಕಾಯ್ದುಕೊಳ್ಳುವ ಹಕ್ಕು ಇದೆ.

ಇಂತಹ ಪ್ರಕರಣಗಳು ನಮ್ಮಲ್ಲಿ ದಿನನಿತ್ಯ ನಡೆಯುತ್ತಲೇ ಇವೆ. ಮಲತಂದೆ ಅಥವಾ ತಾಯಿಯಿಂದ ತೊಂದರೆಗೀಡಾದ ಎಷ್ಟೋ ಮಕ್ಕಳ ಕತೆ ನಮಗೆಲ್ಲ ಗೊತ್ತು. ಆದರೆ ನಮ್ಮ ದೇಶದಲ್ಲಿ ಇವುಗಳನ್ನು ಶೋಷಣೆಯೆಂದು ಯಾರೂ ಪರಿಗಣಿಸುವುದೇ ಇಲ್ಲ. ಕೆಲವು ಮುಂದುವರಿದ ದೇಶಗಳಲ್ಲಿ ಮಕ್ಕಳ ದುರ್ನಡತೆಗೆ ಪೋಷಕರು ಕಟುವಾಗಿ ಟೀಕಿಸಿದಾಗ, ಅಡ್ಡಿ ಮಾಡಿದಾಗ, ಮಕ್ಕಳೇ ಹೋಗಿ ಪೋಲೀಸರಿಗೆ ದೂರು ಕೊಡುವುದು, ಅಂತಹ ಪ್ರಸಂಗಗಳಲ್ಲಿ ಪೋಷಕರಿಗೆ ಶಿಕ್ಷೆ ಆಗಿರುವುದನ್ನು ಕೇಳಿದ್ದೇವೆ. ಇಲ್ಲಿ ನಾವು ನಮ್ಮ ವಿವೇಚನೆಯನ್ನು ಬಳಸಬೇಕು. ಎಲ್ಲಿ ಮಕ್ಕಳಿಗೆ ಅವರ ಉಳಿವು, ಬೆಳವಣಿಗೆಗೆ ಅಡ್ಡಿಯಾಗುವ ಪ್ರಸಂಗಗಳಿವೆಯೋ ಅಂತಹ ಕಡೆ ಮಾತ್ರ ಈ ಅನುಚ್ಛೇದದ ನೆರವು ಪಡೆಯಬೇಕು.



**4.2**

- ಈ ಅನುಚ್ಛೇದದ ಹಿನ್ನೆಲೆಯಲ್ಲಿ ಅಭ್ಯಾಸ 8.1ರಲ್ಲಿ ನೀಡಿರುವ ಪ್ರಕರಣವನ್ನು ಮತ್ತೊಮ್ಮೆ ನೋಡಿ. ಇದರಲ್ಲಿ ಶೋಷಿಸಿದವರಿದ್ದಲ್ಲಿ ಅವರಿಗೆ ಶಿಕ್ಷೆ ನೀಡಬಹುದೇ ವಿಚಾರ ಮಾಡಿ.
- ನೋಡಿ : ಪರಿಚ್ಛೇದ 20 ಹಾಗೂ 21ರ ಬಗ್ಗೆ ಬದುಕಿದರೆ ತಾನೆ ಬಾಳುವುದು ಲೇಖನ. (ಪುಟ 22, 23)



25 ವಿಧಿ

## ನಿಯತಕಾಲಿಕ ಪುನರ್ವಿಮರ್ಶೆ

ಯಾವುದಾದರೂ ಮಗುವಿನ ಆರೈಕೆ, ರಕ್ಷಣೆ, ದೈಹಿಕ ಅಥವಾ ಮಾನಸಿಕ ಚಿಕಿತ್ಸೆಗಾಗಿ ಸರ್ಕಾರ ಸೂಕ್ತ ಅಧಿಕಾರ ಉಳ್ಳವರು, ನಿಯುಕ್ತಿ ಹೊಂದಿದವರ (ಸಂಸ್ಥೆ/ವ್ಯಕ್ತಿ) ಬಳಿ ಮಗುವನ್ನು ಇರಿಸಿದಾಗ, ಅಂತಹ ಆರೈಕೆ, ರಕ್ಷಣೆ, ಚಿಕಿತ್ಸೆಯ ಪ್ರಗತಿ, ಪರಾಮರ್ಶೆ ಮಾಡಲು ಸೂಕ್ತ ಮಾಹಿತಿಯನ್ನು ಪಡೆಯುವ ಹಕ್ಕನ್ನು ಮಗು ಹೊಂದಿರುತ್ತದೆ.



ಕಾನೂನು

- **ಮಕ್ಕಳಿಗೆ ನ್ಯಾಯ ಕಾನೂನು** (Juvenile Justice Act-1986) ಮಕ್ಕಳನ್ನು ನೋಡಿಕೊಳ್ಳುವ ಸಂಸ್ಥೆಗಳು ಬಾಲಕ-ಬಾಲಕಿಯರ ನಿರೀಕ್ಷಣಾ ಗೃಹಗಳು ಇತ್ಯಾದಿಗಳಲ್ಲಿ ಮುಖ್ಯಸ್ಥರು, ಮಕ್ಕಳನ್ನು ವೈಯಕ್ತಿಕವಾಗಿ ಭೇಟಿಯಾಗಿ ಅವರ ಅಭಿಪ್ರಾಯವನ್ನು ಕೇಳಬೇಕು.
- **ಪೋಷಕರು ಮತ್ತು ಮಕ್ಕಳ ಕಾನೂನು** (Guardians and Wards Act-1890) ಸರ್ವೋಚ್ಚ ನ್ಯಾಯಾಲಯದ ತೀರ್ಪಿನಂತೆ ಭಾರತದಲ್ಲಿ ಅಥವಾ ಹೊರದೇಶಕ್ಕೆ ಮತ್ತು ದತ್ತುವಿನಲ್ಲಿ ಹೋದಾಗ ಪೋಷಕರ ಬಳಿ ಇದ್ದಲ್ಲಿ ಅಂತಹ ಮಕ್ಕಳ ಪ್ರಗತಿ, ಆರೋಗ್ಯ, ಬೆಳವಣಿಗೆ, ಹೊಂದಿಕೊಂಡು ಹೋಗುತ್ತಿರುವ ವಿಚಾರಗಳ ಬಗ್ಗೆ ದತ್ತು ನೀಡಿದ ಅಥವಾ ಫಾಸ್ಟರ್ ಕೇರ್ ನೀಡಿದ ಸಂಸ್ಥೆಗೆ ಕಾಲಕಾಲಕ್ಕೆ ಮಾಹಿತಿ ನೀಡಬೇಕು.

  ಅನಾಥಾಲಯಗಳು ಮತ್ತು ಇತರ ಧರ್ಮಾಲಯಗಳ (ಮೇಲ್ವಿಚಾರಣೆ ಮತ್ತು ಹತೋಟಿ) ಕಾನೂನು (The Orphanages and other Charitable Homes [Supervision & Control] Act-1960) ಅನಾಥಾಲಯಗಳನ್ನು ಸ್ಥಾಪಿಸಿ, ನಡೆಸಲು ನಿಯಮಗಳು, ಊಟ, ವಸತಿ, ರಕ್ಷಣೆಗೆ ವಿಧಿ-ವಿಧಾನಗಳನ್ನು ಹಾಕಿ, ಅಂತಹ ಸಂಸ್ಥೆಗಳಿಗೆ ಮಾನ್ಯತೆ ನೀಡುವ, ಉಸ್ತುವಾರಿ ಮಾಡುವ ಅಧಿಕಾರ ಸರಕಾರ ಹೊಂದಿದೆ.

## ಬಾಲ ಕಾರ್ಮಿಕರು/ಆರ್ಥಿಕ ಶೋಷಣೆ



32

1. ಮಕ್ಕಳು ಹಣ ಸಂಪಾದನೆಗಾಗಿ ಅಥವಾ ಇಲ್ಲದೆ ಯಾವುದೇ ಉದ್ದಿಮೆಯಲ್ಲಿ ದುಡಿಯಬಾರದು. ಬಾಲ್ಯವನ್ನು ಕಡೆಗಾಣಿಸಿ ಅಪಾಯಕಾರಿ ಉದ್ದಿಮೆಗಳಲ್ಲಿ ಮಕ್ಕಳನ್ನು ದುಡಿಸುವ ಪರಿಸ್ಥಿತಿಯನ್ನು ಸರಕಾರವು ತಡೆಗಟ್ಟಬೇಕು. ಶಿಕ್ಷಣ, ಆರೋಗ್ಯ, ಮನೋರಂಜನೆ ಮಕ್ಕಳಿಗೆ ದೊರಕಲೇಬೇಕು. ಮಕ್ಕಳ ಈ ಹಕ್ಕನ್ನು ಸರಕಾರವು ಮಾನ್ಯ ಮಾಡಬೇಕು.
2. ಈ ಮೇಲಿನವುಗಳನ್ನು ಜಾರಿಗೆ ತರಲು ಸರಕಾರಗಳು ಶಾಸನಾತ್ಮಕ, ಆಡಳಿತಾತ್ಮಕ, ಸಾಮಾಜಿಕ ಮತ್ತು ಶೈಕ್ಷಣಿಕ ಕ್ರಮಗಳನ್ನು ಕೈಗೊಳ್ಳಬೇಕು. ಅದಕ್ಕಾಗಿ ಈ ಮುಂದಿನ ಕ್ರಮಗಳು ಅತ್ಯಗತ್ಯ.

ಎ. ಉದ್ಯೋಗಕ್ಕೆ ಸೇರಲು ಕನಿಷ್ಠ ವಯೋಮಿತಿ ನಿಗದಿ ಮಾಡುವುದು.

ಬಿ. ಉದ್ಯೋಗದ ಅವಧಿ ಮತ್ತು ಸ್ಥಿತಿಗತಿಗಳ ನಿಯಂತ್ರಣ, ನಿಯಮ.

ಸಿ. ಈ ನಿಯಮಗಳನ್ನು ಜಾರಿಗೆ ತರದವರಿಗೆ ಶಿಕ್ಷೆ ವಿಧಿಸಲೂ ಸಹ ಸರಕಾರಗಳು ನಿಯಮಗಳನ್ನು ರೂಪಿಸಬೇಕು.



ಕಾನೂನು

- **ಕಾರ್ಖಾನೆ ಕಾನೂನು** (Factories Act-1948) 15 ವರ್ಷದೊಳಗಿನ ಮಕ್ಕಳನ್ನು ಕೆಲಸಕ್ಕೆ ತೆಗೆದುಕೊಳ್ಳುವುದನ್ನು ನಿಷೇಧಿಸುತ್ತದೆ (ಸೆಕ್ಷನ್ 2ಸಿ). 14 ವರ್ಷದೊಳಗಿನ ಮಕ್ಕಳನ್ನು ಕಾರ್ಖಾನೆಯಲ್ಲಿ ಕೆಲಸಕ್ಕೆ ತೆಗೆದುಕೊಳ್ಳಬಾರದು (ಸೆಕ್ಷನ್ 67)
- **ಗಣಿ ಕಾನೂನು** (Mines Act-1952) ಸೆಕ್ಷನ್ 40 : 18 ವರ್ಷದೊಳಗಿರುವ ಮಕ್ಕಳ ದುಡಿಮೆಯನ್ನು ಇದು ನಿಷೇಧಿಸುವುದು. ಆದರೆ ವೃತ್ತಿ ತರಬೇತಿಗಾಗಿ 16 ವರ್ಷ ಆಗಿರುವವರನ್ನು ತೆಗೆದುಕೊಳ್ಳಬಹುದು.
- **ಸಾರಿಗೆ ಮೋಟಾರು ಕೆಲಸಗಾರರ ಕಾನೂನು** (Motor Transport Workers Act-1962) ಯಾವುದೇ ಸಾರಿಗೆ ವಾಹನದಲ್ಲಿ 14 ವರ್ಷದೊಳಗಿನ ಮಕ್ಕಳ ದುಡಿಮೆ ನಿಷೇಧಿಸುತ್ತದೆ. ಸೆಕ್ಷನ್ 14-ಯಾವುದೇ ಹದಿವಯಸ್ಕನನ್ನು ವಿರಾಮದ ಸಮಯವನ್ನೂ ಸೇರಿಸಿಕೊಂಡು 6 ಗಂಟೆಗಳಿಗಿಂತ ಹೆಚ್ಚಿಗೆ ದುಡಿಸಿಕೊಳ್ಳಬಾರದು. ಈ ಕೆಲಸದ ಅವಧಿ ಬೆಳಿಗ್ಗೆ 10ರಿಂದ ಸಂಜೆ 6 ಗಂಟೆಯೊಳಗಿರಬೇಕು.
- **ಬೀಡಿ, ಸಿಗಾರ್ ಕೆಲಸಗಾರರು (ವೃತ್ತಿ ಸ್ಥಿತಿಗತಿ) ಕಾನೂನು** (Beedi & Sigar Workers [Condition of Employment] Act-1961) ಬೀಡಿ ಅಥವಾ ಸಿಗಾರ್ ತಯಾರಿಸುವ ಯಾವುದೇ ಕೈಗಾರಿಕಾ ಆವರಣದಲ್ಲಿ ಯಾವುದೇ ಕೆಲಸಕ್ಕೆ ಮಕ್ಕಳನ್ನು ತೆಗೆದುಕೊಳ್ಳುವುದನ್ನು ನಿಷೇಧಿಸುತ್ತದೆ.
- **ವೃತ್ತಿ ಶಿಕ್ಷಣ ಕಾಯ್ದೆ** (Apprentice Act-1961) 14 ವರ್ಷದೊಳಗಿನ ಯಾವುದೇ ಮಗುವನ್ನು ಶಿಷ್ಯವೃತ್ತಿ ಅಥವಾ ತರಬೇತಿಗೆ ತೆಗೆದುಕೊಳ್ಳುವುದನ್ನು ನಿಷೇಧಿಸುತ್ತದೆ.
- **ವ್ಯಾಪಾರೀ ಹಡಗು ಕಾನೂನು** (Merchant Shipping Act-1958) 14 ವರ್ಷದೊಳಗಿನ ಯಾವುದೇ ಮಗುವನ್ನು ಸಾಗಣೆ ಹಡಗಿನಲ್ಲಿ ಯಾವುದೇ ಉದ್ಯೋಗಕ್ಕೆ ತೆಗೆದುಕೊಳ್ಳುವುದನ್ನು ನಿಷೇಧಿಸುತ್ತದೆ.

- **ಬಾಲ ಕಾರ್ಮಿಕ ಪದ್ಧತಿ (ನಿಷೇಧ ಮತ್ತು ನಿಯಂತ್ರಣ) ಕಾನೂನು** (Child Labour [Prohibition & Regulation] Act-1986) ಈ ಕಾನೂನು ಪಟ್ಟಿ ಮಾಡಿರುವ ಕೆಲವು ಉದ್ದಿಮೆಗಳಲ್ಲಿ ಮಕ್ಕಳು ದುಡಿಯುವುದನ್ನು ಇದು ನಿಷೇಧಿಸುತ್ತದೆ. ಮಕ್ಕಳು ದುಡಿಯಲೇಬೇಕಾದಲ್ಲಿ ಆ ಪರಿಸ್ಥಿತಿ ಹೇಗಿರಬೇಕೆಂದು ನಿರ್ದೇಶಿಸುತ್ತದೆ. (ವಿವರಗಳಿಗೆ ಮೂಲ ಕಾನೂನು ನೋಡಿ).
- **ಭಾರತದ ಸಂವಿಧಾನ** ಕಲಂ 24 - ಗಣಿ, ಕಾರ್ಖಾನೆ ಮೊದಲಾದ ಅಪಾಯಕಾರಿ ಉದ್ದಿಮೆಗಳಲ್ಲಿ 14 ವರ್ಷದೊಳಗಿನ ಮಕ್ಕಳನ್ನು ನೇಮಿಸಿಕೊಳ್ಳಬಾರದು.

ಪರಿಚ್ಛೇದ-32ರ ಸಂಬಂಧಿತ ಕಾನೂನುಗಳ ವಿಮರ್ಶೆ ಮಾಡಲು ನೀವೇ ಸಮರ್ಥರು. ಮೊದಲನೆಯದಾಗಿ ವಯಸ್ಸಿಗೆ ಸಂಬಂಧಿಸಿದಂತೆ, ಎರಡನೆಯದು ಈ ಕಾನೂನುಗಳ ಜಾರಿಯಲ್ಲಿರುವ ವಿಳಂಬ, ಅಧಿಕಾರಿಗಳಿಗೆ ಇವುಗಳ ಜಾರಿಗೆ ಇರುವ ನಿರ್ಲಕ್ಷ್ಯ.

ಅನೇಕ ಪ್ರಸಂಗಗಳಲ್ಲಿ ದುಡಿಯುತ್ತಿರುವ ಮಕ್ಕಳ ವಿವರ ಸಲ್ಲಿಸಿದರೂ ಅವುಗಳ ಜಾರಿಗೆ ಯಾರೂ ಮನಸ್ಸು ಮಾಡದಿರುವುದು, ಇವುಗಳ ಕಟ್ಟುನಿಟ್ಟಾದ ಜಾರಿಗೆ ಮತ್ತು ಶಿಕ್ಷೆಯನ್ನು ವಿಧಿಸುವುದು ಅತ್ಯಾವಶ್ಯಕ. ಇತ್ತೀಚಿನ ದಿನಗಳಲ್ಲಿ ಕಾರ್ಖಾನೆ, ಹೊಟೆಲ್‌ಗಳಿಗಿಂತ ಹೆಚ್ಚಾಗಿ ಮನೆಗೆಲಸಕ್ಕೆ ಬರುವ ಮಕ್ಕಳ ಬಗ್ಗೆ ಹೆಚ್ಚು ಹೆಚ್ಚು ವಿವರಗಳು, ದುರಂತಗಳು ಬೆಳಕಿಗೆ ಬರುತ್ತಿವೆ. ಆದರೆ ಈ ಬಗ್ಗೆ ಯಾವುದೇ ಕಾನೂನು ಇಲ್ಲ. ಕೋಟೆ ಕೊಳ್ಳೆ ಹೋದಮೇಲೆ ದಿಡ್ಡಿ ಬಾಗಿಲು ಹಾಕಿದಂತೆ, ದುಡಿಯುವ ಮಗು ಸತ್ತಮೇಲೆ, ತೀರಾ ಕೆಟ್ಟದಾಗಿ ದೌರ್ಜನ್ಯಕ್ಕೆ ಒಳಗಾದ ಮೇಲೆ ಕಾನೂನು ಹೋಗಿ ಏನು ತಾನೆ ಮಾಡೀತು.

ವಿಶೇಷವಾಗಿ ಈ ಹಕ್ಕನ್ನು ಕುರಿತು ಎಲ್ಲೆಡೆ ಚರ್ಚೆ, ವಿಶ್ಲೇಷಣೆ ಸದಾ ಮಾಡುತ್ತಲೇ ಇರಬೇಕಿದೆ. ಭಾರತ ಸರ್ಕಾರಕ್ಕೆ ಅತಿಯಾದ ಕಗ್ಗಂಟಾಗಿರುವ ಹಕ್ಕು ಇದೇ ಆಗಿದೆ. ಈ ಬಗ್ಗೆ ಮೊದಲೇ ಹೇಳಲಾಗಿದೆ. ಭಾರತದ ದುಡಿಯುವ ಮಕ್ಕಳ ಭವಿಷ್ಯದ ಬಗ್ಗೆ ತೊಡರುಗಾಲಾಗಿರುವುದೇ ಇದು.

**4.3**



- ನಿಮ್ಮ ಪ್ರದೇಶದಲ್ಲಿರುವ ದುಡಿಯುವ ಮಕ್ಕಳು ಎಷ್ಟು, ಎಲ್ಲಿ, ಹೇಗೆ ಇದ್ದಾರೆ. ಅಲ್ಲಿ ಯಾವ ಯಾವ ಹಕ್ಕು, ಕಾನೂನುಗಳ ಉಲ್ಲಂಘನೆ ಆಗಿದೆ? ಇವನ್ನು ಕಂಡುಕೊಂಡು ಇತರರೊಡನೆ ಹಂಚಿಕೊಳ್ಳಿ.
- ಈ ಕುರಿತು ಪತ್ರಿಕೆಗಳಲ್ಲಿ ಬರುವ ಲೇಖನ, ವರದಿ ಇತ್ಯಾದಿಗಳನ್ನು ತೆಗೆದುಕೊಂಡು ವಿಶ್ಲೇಷಿಸಿ, ನಿಮ್ಮ ಪ್ರದೇಶದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಹಾಗೂ ಕಾರ್ಮಿಕ ಇಲಾಖೆಯೊಂದಿಗೆ ಸಂಪರ್ಕ ಇಟ್ಟುಕೊಂಡು ಮಾಹಿತಿಗಳ ವಿನಿಮಯ ಮಾಡಿಕೊಳ್ಳಿ.
- ಎನ್.ಸಿ.ಎಲ್.ಪಿ. ಶಾಲೆಗಳು ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ನಡೆಸುವ ವಿಶೇಷ ಶಾಲೆ ನಿಮ್ಮ ಪ್ರದೇಶದಲ್ಲಿ ಇದ್ದಲ್ಲಿ ಆ ಬಗ್ಗೆ ವಿಮರ್ಶಿಸಿ, ಇತರರೊಡನೆ ಹಂಚಿಕೊಳ್ಳಿ.



## ಲೈಂಗಿಕ ಶೋಷಣೆಯಿಂದ ರಕ್ಷಣೆ

34

**ಮಕ್ಕಳನ್ನು ಎಲ್ಲ ರೀತಿಯ ಲೈಂಗಿಕ ಶೋಷಣೆ ಮತ್ತು ಲೈಂಗಿಕ ದೂಷಣೆ, ದುರುಪಯೋಗಗಳಿಂದ ರಕ್ಷಿಸಬೇಕು. ಇದಕ್ಕಾಗಿ ಎಲ್ಲ ದೇಶಗಳು ತಮ್ಮ ಸ್ವದೇಶದಲ್ಲಿ ಹಾಗೂ ಅಂತಾರಾಷ್ಟ್ರೀಯ ಮಟ್ಟದಲ್ಲಿ ಒಪ್ಪಂದ ಹಾಗೂ ಕ್ರಮಗಳನ್ನು ಕೈಗೊಳ್ಳಬೇಕು.**

ಎ. **ಅಕ್ರಮವಾದ ಲೈಂಗಿಕ ಚಟುವಟಿಕೆಗಳಲ್ಲಿ ತೊಡಗುವಂತೆ ಮಗುವಿಗೆ ಆಮಿಷ ತೋರುವುದು ಅಥವಾ ಬಲವಂತವನ್ನು ತಡೆಯಬೇಕು.**

ಬಿ. **ಮಕ್ಕಳನ್ನು ಶೋಷಿಸಿ ಅವರಿಚ್ಛೆಗೆ ವಿರುದ್ಧವಾಗಿ, ಭಯದಲ್ಲಿ ವೇಶ್ಯಾವೃತ್ತಿಗೆ ಬೀಳುವಂತೆ ಇಲ್ಲವೆ ಇನ್ನಿತರ ಲೈಂಗಿಕ ಚಟುವಟಿಕೆಗಳಿಗೆ ತೊಡಗುವಂತೆ ಮಾಡುವುದನ್ನು ತಡೆಗಟ್ಟಬೇಕು.**

ಸಿ. **ಅಶ್ಲೀಲ ಕಾರ್ಯಕ್ರಮಗಳಲ್ಲಿ, ಅಶ್ಲೀಲ ಸಾಮಗ್ರಿಗಳ ತಯಾರಿ (ಫೋಟೋ, ಚಲನಚಿತ್ರ, ವಿಡಿಯೋ ಚಿತ್ರ, ಸಂಭಾಷಣೆ, ಧ್ವನಿಸುರುಳಿ)ಯಲ್ಲಿ ಮಕ್ಕಳನ್ನು ಶೋಷಿಸುವುದನ್ನು ಸರಕಾರಗಳು ತಡೆಗಟ್ಟಬೇಕು.**



ಕಾನೂನು

**ಭಾರತೀಯ ದಂಡ ಸಂಹಿತೆ** (Indian Penal Code-1860)ರ

ಸೆಕ್ಷನ್ 366A ರಂತೆ ಅಪ್ರಾಪ್ತ ವಯಸ್ಕ ಹೆಣ್ಣುಮಕ್ಕಳನ್ನು ದುರುದ್ದೇಶದಿಂದ ಭಾರತದ ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ಕರೆದೊಯ್ದರೆ ದಂಡ ವಿಧಿಸಲಾಗುವುದು.

ಸೆಕ್ಷನ್ 366A ರಂತೆ 21 ವರ್ಷದೊಳಗಿನ ಹೆಣ್ಣುಮಕ್ಕಳನ್ನು ವೇಶ್ಯಾವೃತ್ತಿಗಾಗಿ ಕರೆತಂದಲ್ಲಿ ದಂಡ ವಿಧಿಸಲಾಗುವುದು.

ಸೆಕ್ಷನ್ 372 ಮತ್ತು 373ರಂತೆ ಅಪ್ರಾಪ್ತ ವಯಸ್ಕರನ್ನು ವೇಶ್ಯಾವೃತ್ತಿಗೆ ಸೆಳೆಯುವುದು, ಮಾರುವುದು ಅಥವಾ ಕೊಳ್ಳುವುದು ಮಾಡಿದಲ್ಲಿ ದಂಡ ವಿಧಿಸಲಾಗುವುದು.

ಸೆಕ್ಷನ್ 375ರಂತೆ 16 ವರ್ಷದೊಳಗಿನ ಬಾಲಕಿಯ ಮೇಲೆ ಅವಳ ಒಪ್ಪಿಗೆ ಇಲ್ಲದೆ ಲೈಂಗಿಕ ಸಂಭೋಗವಾದಲ್ಲಿ ಅತ್ಯಾಚಾರವೆಂದು ಪರಿಗಣಿಸಿ ಅದಕ್ಕೆ ದಂಡ ವಿಧಿಸಲಾಗುವುದು.

ಸೆಕ್ಷನ್ 376(2)ರಂತೆ 12 ವರ್ಷದೊಳಗಿನ ಯಾವುದೇ ಹೆಣ್ಣು ಮಗುವಿನ ಮೇಲೆ ಅತ್ಯಾಚಾರ ಮಾಡಿದಲ್ಲಿ ದಂಡ ವಿಧಿಸಲಾಗುವುದು.

ಸೆಕ್ಷನ್ 377 : ಮಕ್ಕಳನ್ನು ಮೈಥುನಕ್ಕೆ ಸೆಳೆಯುವುದು ಶಿಕ್ಷಾರ್ಹ ಅಪರಾಧ.

- **ಅನೈತಿಕ ವ್ಯವಹಾರ (ತಡೆ) ಕಾನೂನು** (Immoral Traffic [Prevention] Act-1956) ಹೆಣ್ಣು ಮಗು ಎಂದರೆ 16 ವರ್ಷದೊಳಗಿನ ಹುಡುಗಿ ಎಂದು ಹೇಳುವುದು. (ವೇಶ್ಯಾಗೃಹದಲ್ಲಿರುವ ಮಗು, ಹೆಣ್ಣು ಮಕ್ಕಳ ದುರುಪಯೋಗ ಇತ್ಯಾದಿ).

ಸೆಕ್ಷನ್ 6 - ಯಾರಾದರೂ ಹೆಣ್ಣುಮಗುವಿನೊಂದಿಗೆ ವೇಶ್ಯಾಗೃಹದಲ್ಲಿ ಕಂಡುಬಂದರೆ, ಹಾಗೂ/ಅಥವಾ ಆ ಮಗುವಿನ ವೈದ್ಯಕೀಯ ಪರೀಕ್ಷೆಯಲ್ಲಿ ಮಗುವಿನೊಂದಿಗೆ/ಮೇಲೆ ಲೈಂಗಿಕ ಚಟುವಟಿಕೆ ಆಗಿದ್ದಲ್ಲಿ ಆ ವ್ಯಕ್ತಿಗೆ ಶಿಕ್ಷೆ ನೀಡಬೇಕು.

ಸೆಕ್ಷನ್ 376(ಸಿ) ಮಕ್ಕಳ ಗೃಹದಲ್ಲಿರುವ ಮಗುವಿನ ಮೇಲೆ ಆ ಗೃಹದ ಮೇಲ್ವಿಚಾರಕರು ಅಥವಾ ಯಾವುದೇ ನೌಕರರು ಅತ್ಯಾಚಾರ, ಸಲಿಂಗರತಿಯಲ್ಲಿ ತೊಡಗಿದರೆ ಕಠಿಣ ಶಿಕ್ಷೆ ವಿಧಿಸಲಾಗುವುದು.

ಕೆಲವು ವರ್ಷಗಳ ಹಿಂದೆ ಮಕ್ಕಳನ್ನು ಲೈಂಗಿಕ ಚಟುವಟಿಕೆಗಳಿಗೆ ತೊಡಗಿಸುವುದು, ಸಲಿಂಗ ಕಾಮಿಗಳಿಗೆ ಒದಗಿಸುವುದು, ಫೋಟೋಗಳ ಸಾಗಣೆ ಮಾಡುತ್ತಿದ್ದುದು ಪೋಲಿಸ್ ಇಲಾಖೆಯ ಗಮನಕ್ಕೆ ಬಂದಿತ್ತು. ಇದಕ್ಕೆ ಸಂಬಂಧಿಸಿದಂತೆ ಗೋವಾದಲ್ಲಿ ಒಬ್ಬರನ್ನು ಬಂಧಿಸಲಾಯಿತು. ಇಂತಹ ಪ್ರಸಂಗಗಳು ನಿಮ್ಮಲ್ಲಿ ನಡೆದಿದೆಯೆ ?

ಮಕ್ಕಳಿಗೆ ತಮ್ಮ ಮೇಲಾಗುತ್ತಿರುವ ಶೋಷಣೆಯ ಅರಿವೇ ಇಲ್ಲದೆ ಇಂತಹ ಜಾಲದಲ್ಲಿ ಸಿಲುಕಿರಬಹುದು. ಇವುಗಳ ಕುರುಹು ತಿಳಿದ ತಕ್ಷಣ ಸಂಬಂಧಪಟ್ಟ ಆರಕ್ಷಕರಿಗೆ ತಿಳಿಸುವುದು ಸೂಕ್ತ.



## ಮಕ್ಕಳ ಮಾರಾಟ, ಹಿಡಿದಿಡುವ ವಿರುದ್ಧ ರಕ್ಷಣೆ

35 ವಿಧಿ

**ಮಕ್ಕಳನ್ನು ಯಾವುದೇ ಉದ್ದೇಶಕ್ಕೆ/ದುರುದ್ದೇಶಕ್ಕೆ ಅಪಹರಿಸದಂತೆ, ಮಾರಾಟ ಮಾಡದಂತೆ, ಸಾಗಣೆ ಮಾಡದಂತೆ, ವೇಶ್ಯಾವೃತ್ತಿಗೆ ದೂಡದಂತೆ ಸರ್ಕಾರ ಕ್ರಮ ಕೈಗೊಳ್ಳಬೇಕು. ಇತರ ದೇಶಗಳೊಡನೆ ಸರ್ಕಾರ ಒಪ್ಪಂದಗಳನ್ನು ಮಾಡಿಕೊಂಡು ಕ್ರಮ ಕೈಗೊಳ್ಳಬೇಕು.**



ಕಾನೂನು

- **ಭಾರತದ ಸಂವಿಧಾನ** : ಕಲಂ 23 ಮನುಷ್ಯರ ಮಾರಾಟ ಮತ್ತು ಬಲವಂತವಾಗಿ ಜನರಿಂದ ದುಡಿಸಿ ಕೊಳ್ಳುವುದನ್ನು ನಿಷೇಧಿಸಿದೆ.
- **ಭಾರತೀಯ ದಂಡ ಸಂಹಿತೆ** (Indian Penel Code-1860) : ಸೆಕ್ಷನ್ 361 ರಂತೆ 16 ವರ್ಷದೊಳಗಿನ ಗಂಡು ಮಗು ಅಥವಾ 18 ವರ್ಷದೊಳಗಿನ ಹೆಣ್ಣು ಮಗುವನ್ನು ಅಪಹರಿಸುವುದು, ತಡೆಹಿಡಿದಿಡುವುದು ಅಥವಾ ಲೈಂಗಿಕ ಪ್ರಚೋದನೆಗೆ ಗುರಿಪಡಿಸುವುದು ಶಿಕ್ಷಾರ್ಹ ಅಪರಾಧ.

ಸೆಕ್ಷನ್ 366(ಎ), 366(ಬಿ), 372, 373 ರಂತೆ ವೇಶ್ಯಾವೃತ್ತಿಗೆ ದೂಡಲು ಮಕ್ಕಳನ್ನು ಪಡೆಯುವುದು, ಕೊಳ್ಳುವುದು ಅಥವಾ ಮಾರುವುದು ಶಿಕ್ಷಾರ್ಹ ಅಪರಾಧ.

- **ಅನೈತಿಕ ವ್ಯವಹಾರ (ತಡೆ) ಕಾನೂನು** (Immoral Traffic [Prevention] Act-1956) ವೇಶ್ಯಾವೃತ್ತಿಯನ್ನು ಸಂಪೂರ್ಣವಾಗಿ ನಿಷೇಧಿಸದಿದ್ದರೂ ಅದರ ವ್ಯಾಪಾರೀಕರಣವನ್ನು ಶಿಕ್ಷಾರ್ಹ ಅಪರಾಧ ಎಂದು ಪರಿಗಣಿಸುವುದು.
- **ಮಕ್ಕಳನ್ನು ಜೀತ(ಅಡವಿಡುವ) ಕಾನೂನು** (The Children Pledging or Labour Act 1933) ಮಕ್ಕಳನ್ನು ಜೀತಕ್ಕಿಟ್ಟರೆ ಅಂತಹವರಿಗೆ ರೂ.500/- ದಂಡ ವಿಧಿಸಲಾಗುವುದು. ದಂಡವನ್ನು ಏರಿಸಬೇಕಿದೆ.
- **ಜೀತ ವಿಮುಕ್ತ ಕಾನೂನು** (The Bonded Labour [System] Abolition Act-1976) ಯಾರನ್ನೇ ಆಗಲಿ ಜೀತದಲ್ಲಿಡುವುದನ್ನು ನಿಷೇಧಿಸುತ್ತಾ ಹಾಗೆ ದುಡಿಸಿಕೊಳ್ಳುವಂತಹ ಪರಿಸ್ಥಿತಿ, ಜೀತಕ್ಕಿರುವವರ ಆಸ್ತಿ ಜಪ್ತಿ ಆಗಿದ್ದಲ್ಲಿ ಅದನ್ನು ಪುನಃ ಹಿಂದಕ್ಕೆ ಕೊಡಿಸುವ ಬಗ್ಗೆ ಹೇಳುತ್ತದೆ.

**ಸ್ಟೇಟ್ಸ್‌ಮನ್ ಪತ್ರಿಕೆಯ ಜುಲೈ 13, 1998ರ ಸಂಚಿಕೆಯಲ್ಲಿ ಒಂದು ವರದಿ. ಮೈಸೂರಿನ ಸುತ್ತಮುತ್ತಲಿನ ಗಿರಿಜನರು ತಮ್ಮ ಮಕ್ಕಳನ್ನು ನಗರಗಳಿಂದ ಬರುವ ದಲ್ಲಾಳಿಗಳಿಗೆ ರೂ.200-300ಕ್ಕೆ ಮಾರಿದ್ದ ಪ್ರಸಂಗಗಳು. ಇವರು ಸೇರುತ್ತಿದ್ದುದು ತೋಟಗಳ ಕೆಲಸಗಾರರಾಗಿ. ಸ್ವಲ್ಪ ಬೆಳೆದ ಹೆಣ್ಣುಮಕ್ಕಳಾದರೆ ಬೊಂಬಾಯಿಯ ವೇಶ್ಯಾಗೃಹಗಳಿಗೆ. ಈ ಮಕ್ಕಳಾರೂ ಹಿಂದಿರುಗಿದ ಪ್ರಸಂಗಗಳು ಇಲ್ಲ.**

ಮೈಸೂರಿನಲ್ಲಿ ವೇಶ್ಯಾವೃತ್ತಿಯಲ್ಲಿರುವವರ ಮಕ್ಕಳ ಶ್ರೇಯೋಭಿವೃದ್ಧಿಗಾಗಿ ಕೆಲಸ ಮಾಡುತ್ತಿರುವ 'ಒಡನಾಡಿ' ಸಂಸ್ಥೆ ಇಂತಹ ಪ್ರಸಂಗಗಳನ್ನು ಈಗಲೂ ಎತ್ತಿ ತೋರಿಸುತ್ತಿದೆ. ಎಷ್ಟೋ ಬಾರಿ ರಕ್ಷಣೆ ನೀಡಬೇಕಾದವರೇ ಈ ಕೃತ್ಯದಲ್ಲಿ ತೊಡಗಿದ್ದಾರೆ ಎಂದು ಆಪಾದಿಸಲಾಗುತ್ತಿದೆ.

ಕೆಲವು ಅನಧಿಕೃತ ಸಂಸ್ಥೆಗಳು ದತ್ತು ನೀಡುವ ಹೆಸರಿನಲ್ಲಿ ಮಕ್ಕಳನ್ನು ಕೊಳ್ಳುವುದು ಮತ್ತು ಮಾರಾಟಮಾಡುವುದು ನಡೆಯುತ್ತಲೇ ಇದೆ.

ನಿಮ್ಮಲ್ಲಿ ಇಂತಹ ಪ್ರಸಂಗಗಳು ನಡೆದಿದ್ದರೆ ಏನು ಮಾಡಬಹುದು ?

## ಇನ್ನಿತರ ಶೋಷಣೆಗಳ ವಿರುದ್ಧ ರಕ್ಷಣೆ



36

**ಮಕ್ಕಳ ಶ್ರೇಯೋಭಿವೃದ್ಧಿ, ಒಳಿತಿಗೆ ವಿರುದ್ಧವಾದ ಯಾವುದೇ ಕ್ರಮಗಳನ್ನು ಮಗುವಿನ ಶೋಷಣೆ ಎಂದೇ ಪರಿಗಣಿಸಿ ತಡೆಗಟ್ಟಬಹುದು.**



ಕಾನೂನು

ಭಾರತದ ಸಂವಿಧಾನ (ಕಲಂ 23 ಮತ್ತು 24) ಮಕ್ಕಳು ಮತ್ತು ಯುವಕ-ಯುವತಿಯರನ್ನು ಯಾವುದೇ ಶೋಷಣೆಗೆ ಒಳಪಡಿಸಬಾರದೆಂದು ಹೇಳುತ್ತದೆ.

ಇದರಲ್ಲಿ ಬಾಲ್ಯವಿವಾಹ ಪ್ರಕರಣ, ಹೆಣ್ಣುಮಕ್ಕಳನ್ನು ಶಾಲೆ ಬಿಡಿಸುವುದು, ಪುಟ್ಟಮಕ್ಕಳನ್ನು ಮನೆಯಲ್ಲಿ ನೋಡಿಕೊಳ್ಳಲು ಇಟ್ಟುಕೊಳ್ಳುವುದು, ದೇವದಾಸಿಯರನ್ನಾಗಿಸುವುದು, ಜೀತಕ್ಕೆ ತಳ್ಳುವುದು, ಭಿಕ್ಷೆ ಬೇಡಲು ಒತ್ತಾಯಿಸುವುದು, ಚಲನಚಿತ್ರಗಳಲ್ಲಿ ಅಶ್ಲೀಲ ಸಂಭಾಷಣೆ, ಅಶ್ಲೀಲ ನಟನೆಗಳಿಗೆ ಬಳಸಿಕೊಳ್ಳುವುದು ಸಹ ಸೇರುತ್ತದೆ. ಇಂತಹವುಗಳನ್ನು ತಡೆಗಟ್ಟಲು ಏನು ಮಾಡಬೇಕು ? ಸರಕಾರ ಯಾವ ಕ್ರಮ ಕೈಗೊಳ್ಳಬೇಕು?



**4.4**

ನಿಮ್ಮ ಸಮುದಾಯದಲ್ಲಿ ಒಂದು ವರ್ಷದಲ್ಲಿ ಈ ಕೆಳಗಿರುವ ಪ್ರಸಂಗಗಳೆಷ್ಟು ಗಮನಿಸಿದ್ದೀರಾ ? ಇದು ನಿಮ್ಮ ಪರಿಸರದಲ್ಲಿ ಸದ್ಯ ಚಾಲ್ತಿಯಿರುವುದು ಅಥವಾ ಈ ಕಾರಣಗಳಿಗಾಗಿ ನಿಮ್ಮ ಪರಿಸರದಿಂದ ಹೊರಗೆ ಹೋಗಿರುವುದೊ ಆಗಿರಬಹುದು.

| ವಿಚಾರ | ವರ್ಷ 1997 | ವರ್ಷ 1998 | ವರ್ಷ 1998 | ವರ್ಷ 2000 | ವರ್ಷ 2001 | ವರ್ಷ 2002 |
|---|---|---|---|---|---|---|
| ಬಾಲ್ಯ ವಿವಾಹಗಳು | | | | | | |
| ಹೆಣ್ಣು ಮಕ್ಕಳು ಶಾಲೆ ಬಿಡುವುದು | | | | | | |
| ಮನೆಯಲ್ಲಿ ಆಡುವ ಮಕ್ಕಳನ್ನು ನೋಡಿಕೊಳ್ಳುವ ಮಕ್ಕಳು | | | | | | |
| ದೇವದಾಸಿಯರಾದ ಮಕ್ಕಳು | | | | | | |
| ಭಿಕ್ಷೆ ಬೇಡುವ ಮಕ್ಕಳು | | | | | | |
| ಜೀತಕ್ಕಿರುವ ಮಕ್ಕಳು | | | | | | |
| ಒಟ್ಟು | | | | | | |

ಇವು ವರ್ಷೇ ವರ್ಷೇ ಹೆಚ್ಚಾಗುತ್ತಿವೆಯೇ/ಕಡಿಮೆಯಾಗುತ್ತಿವೆಯೇ ಗಮನಿಸಿ. ವಿವರಗಳನ್ನು ಇತರರೊಂದಿಗೆ ಹಂಚಿಕೊಳ್ಳಿ.

**4.5**

ನೀವು ನೋಡಿರುವ ಚಲನಚಿತ್ರಗಳಲ್ಲಿ ಮಕ್ಕಳಿಂದ ಅಶ್ಲೀಲ ನಟನೆ ಸಂಭಾಷಣೆಗಳಲ್ಲಿ ತೊಡಗಿಸಿದ ವಿವರಗಳನ್ನು ಬರೆದಿಡಿ

| ಬಾಲ ನಟ/ನಟಿ | ಚಲನಚಿತ್ರ | ನಿರ್ದೇಶಕರು | ಮುಖ್ಯ ನಟರು | ಪ್ರಸಂಗ | ಪರಿಣಾಮ |
|---|---|---|---|---|---|
| | | | | | |

ಇವುಗಳಿಂದ ಆಗುವ ಪರಿಣಾಮದ ಬಗ್ಗೆ ಚರ್ಚೆ ಮಾಡಿ.

## ಚಿತ್ರಹಿಂಸೆ ಮತ್ತು ಮರಣದಂಡನೆ



37

(ಎ) ಯಾವುದೇ ಮಗುವು ಪೀಡನೆ, ಅಮಾನವೀಯ ಕಿರುಕುಳ, ಹಿಂಸೆ ದಂಡನೆ, ದುರ್ವರ್ತನೆಗೆ ಒಳಗಾಗದಂತೆ ರಕ್ಷಿಸಬೇಕು. 18 ವರ್ಷದ ಒಳಗಿನ ಯಾವುದೇ ಮಗುವಿಗೆ ಮರಣದಂಡನೆ, ಆಜೀವ ಸೆರೆವಾಸಕ್ಕೆ ಗುರಿಪಡಿಸದಂತೆ ಸರ್ಕಾರ ರಕ್ಷಿಸಬೇಕು.

(ಬಿ) ಮಕ್ಕಳ ಬಂಧನ ಕಾನೂನಿಗೆ ಅನುಗುಣವಾಗಿರಬೇಕು. ಬಂಧನ ತೀರಾ ಅನಿವಾರ್ಯವಾದಾಗ ಮಾತ್ರ ಆಗಬೇಕು. ಅಕ್ರಮವಾಗಿ ಬಂಧಿಸುವುದು, ಅವರ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳುವುದು ಅನಪೇಕ್ಷಣೀಯ.

(ಸಿ) ಮಗುವನ್ನು ಬಂಧಿಸುವುದು ಅನಿವಾರ್ಯವಾದಲ್ಲಿ ಆ ಮಗುವಿನ ಗೌರವಗಳಿಗೆ ಚ್ಯುತಿ ಬಾರದಂತೆ ನೋಡಿಕೊಳ್ಳಬೇಕು. ಅಂತಹ ಮಕ್ಕಳನ್ನು ವಯಸ್ಕ ಬಂಧಿತರಿಂದ ಪ್ರತ್ಯೇಕಿಸಿಡಬೇಕು. ಮಗುವಿನ ಒಟ್ಟಾರೆ ಹಿತದೃಷ್ಟಿಯಿಂದ ಕುಟುಂಬದ ಹಿರಿಯರೊಡನೆ ಸಂಪರ್ಕ, ಪತ್ರ ವ್ಯವಹಾರ, ಅವಶ್ಯವಿದ್ದಲ್ಲಿ ಭೇಟಿಗೆ ಅವಕಾಶವಿರಬೇಕು.

(ಡಿ) ಬಂಧನಕ್ಕೊಳಗಾದ ಮಗುವಿಗೆ ನ್ಯಾಯ ಪಡೆದುಕೊಳ್ಳಲು ಕಾನೂನು ನೆರವು ಪಡೆಯುವ ಹಕ್ಕಿದೆ. ಬಂಧನ ಕ್ರಮಬದ್ಧತೆಯನ್ನು ಪ್ರಶ್ನಿಸಲು, ನಿಷ್ಪಕ್ಷಪಾತವಾದ ನ್ಯಾಯ ದೊರಕಿಸಿಕೊಳ್ಳುವ ಅವಕಾಶ ಕೋರಲು ಹಾಗೂ ಆದಷ್ಟೂ ಬೇಗ ತೀರ್ಪು ನೀಡಬೇಕೆಂದು ಕೋರುವ ಹಕ್ಕು ಇದೆ.



ಕಾನೂನು

ಮಕ್ಕಳಿಗೆ ನ್ಯಾಯ ಕಾನೂನು (J.J. Act-1986) ತಪ್ಪು ಮಾಡಿದ ಯಾವುದೇ ಮಗುವಿಗೆ ಚಿತ್ರಹಿಂಸೆ, ಮರಣದಂಡನೆ ವಿಧಿಸಬಾರದು (ಸೆಕ್ಷನ್-22).

ಬೆಂಗಳೂರಿನ ಕಾರಾಗೃಹವಾಸಿಗಳಿಗೆ ಏಡ್ಸ್ (AIDS) ಬಗ್ಗೆ ಜಾಗೃತಿ ಮೂಡಿಸಲು ಹೋದ ಸಂಸ್ಥೆಯ ಪ್ರತಿನಿಧಿಗಳು ಕಾರಾಗೃಹದಲ್ಲಿ ಮಕ್ಕಳನ್ನು ಕಂಡರು. ಅಲ್ಲಿ 14-16 ವರ್ಷದ ಅವರೆಲ್ಲರೂ ಸಲಿಂಗರತಿಯ ಲೈಂಗಿಕ ಶೋಷಣೆಗೆ ಒಳಗಾಗುತ್ತಿರುವುದು ಪತ್ತೆಯಾಯಿತು. ಆದರೆ ದಾಖಲೆಗಳಲ್ಲಿ ಅವರು ವಯಸ್ಸು 18 ವರ್ಷ ದಾಟಿದವರೆಂದು ಇತ್ತು. ಇಂತಹವುಗಳು ಆಕಸ್ಮಾತ್ ಆಗಿರುವುದೋ ಅಥವಾ ಅದರ ಹಿಂದೆ ಯಾರದಾದರೂ ದುರುದ್ದೇಶದ ಕೈವಾಡ ಇದೆಯೋ ಎಂಬುದು ಪ್ರತ್ಯಕ್ಷದರ್ಶಿಗಳ ಪ್ರಶ್ನೆ.

**4.6**



- ಮಕ್ಕಳಿಗೆ ನ್ಯಾಯ ಕಾನೂನು (Juvenile Justice Act-1986) ಓದಿದಾಗ ಈ ಪರಿಚ್ಛೇದದಲ್ಲಿ ಹೇಳಿರುವ ವಿಚಾರಗಳಿಗೂ, ಮಕ್ಕಳ ಹಕ್ಕುಗಳ ಒಡಂಬಡಿಕೆಯ ಪರಿಚ್ಛೇದ-37ಕ್ಕೂ ಏನಾದರೂ ಸಂಬಂಧ ಇದೆಯೆ, ಗಮನಿಸಿ.
- ನಿಮ್ಮ ಕಾರ್ಯಕ್ಷೇತ್ರದಲ್ಲಿ ಯಾವುದಾದರೂ ಮಗುವನ್ನು ಯಾವುದಾದರೂ ಆಪಾದನೆಯ ಮೇಲೆ ಬಂಧಿಸಿದಾಗ ಏನೇನಾಯಿತು? ಮಗುವಿಗೆ ನ್ಯಾಯ ದೊರಕಿತೆ ?
- ಮಕ್ಕಳನ್ನು ಬಂಧಿಸಿದಾಗ ಮಕ್ಕಳೊಡನೆ ಪೋಲೀಸರ ವರ್ತನೆ ಹೇಗಿತ್ತು ? ಹೇಗಿದ್ದರೊಳಿತು ? ಚರ್ಚಿಸಿ.
- ಸ್ಥಳೀಯ ಕಾರಾಗೃಹಕ್ಕೆ ತೆರಳಿ ಅಲ್ಲಿ ಎಷ್ಟು ಮಕ್ಕಳಿದ್ದಾರೆ, ಅವರು ಯಾಕೆ ಅಲ್ಲಿರಬೇಕು ಅಥವಾ ಇರಬಾರದು ತಿಳಿಯಿರಿ. ಅವರ ಕಾರಾಗೃಹ ವಾಸದ ಬದುಕು, ಆರೋಗ್ಯ, ಸಹವಾಸ, ಶೋಷಣೆ (ದೈಹಿಕ, ಮಾನಸಿಕ, ಲೈಂಗಿಕ) ಹೇಗಿದೆ ಎಂದು ತಿಳಿದು ಸಂಬಂಧಪಟ್ಟವರಿಗೆ ತಿಳಿಸಿ.
- ನಿಮ್ಮ ಸಮೀಪದ ಬಾಲಮಂದಿರದಲ್ಲಿ ಎಷ್ಟೆಷ್ಟು ದಿನಗಳಿಂದ ಎಷ್ಟು ಮಕ್ಕಳಿದ್ದಾರೆ. ಅವರಲ್ಲಿ ಎಷ್ಟು ಮಕ್ಕಳ ಪ್ರಕರಣಗಳ ವಿಚಾರಣೆ ಆಗಿದೆ ಅಥವಾ ಇಲ್ಲ ತಿಳಿದುಕೊಳ್ಳಿ. ಸಂಬಂಧಪಟ್ಟವರ ಗಮನಕ್ಕೆ ಇದನ್ನು ತನ್ನಿ.



39

ವಿಧಿ

## ಪುನರ್ವಸತಿ ವ್ಯವಸ್ಥೆ

ನಿರ್ಲಕ್ಷ್ಯ, ಶೋಷಣೆ, ಕಿರುಕುಳ, ಕ್ರೌರ್ಯ, ಅಮಾನವೀಯ ಅಥವಾ ಅವಮಾನದ ವರ್ತನೆ, ದಂಡನೆ, ಲೈಂಗಿಕ ಆಘಾತ, ಶಸ್ತ್ರಘರ್ಷಣೆಗೆ ಒಳಗಾಗಿ ನೊಂದ ಬೆಂದ ಮಕ್ಕಳ ದೈಹಿಕ, ಮಾನಸಿಕ ಸುಧಾರಣೆ ಅತ್ಯಗತ್ಯ. ಅವರು ಸಮಾಜದ ಮುಖ್ಯವಾಹಿನಿಯಲ್ಲಿ ಬೆರೆಯುವಂತೆ ಹಾಗೂ ಅವರ ಆರೋಗ್ಯ, ಮಾನಸಿಕ ನೆಮ್ಮದಿ, ಗೌರವಗಳಿಗೆ ಚ್ಯುತಿ ಬರದಂತೆ ನೋಡಿಕೊಳ್ಳಲೇಬೇಕು.



- ಯಾವುದೇ ವಿಶೇಷ ಕಾನೂನು ಇಲ್ಲ.



4.7

- ಬಾಲಮಂದಿರದಿಂದ ಬಿಡುಗಡೆಯಾಗಿ ಬಂದ ಅಥವಾ ಪ್ರೊಬೇಷನ್, ಪೆರೋಲ್ ಮೇಲೆ ಬಂದ ಮಕ್ಕಳ ಸ್ಥಿತಿ ಗತಿ ಹೇಗಿದೆ ?



40

## ಮಕ್ಕಳಿಗೆ ನ್ಯಾಯ

ಮಾನವ ಹಕ್ಕುಗಳು ಹಾಗೂ ಮೂಲಭೂತ ಹಕ್ಕುಗಳ ಹಿನ್ನೆಲೆಯಲ್ಲಿ ಕಾನೂನುಗಳನ್ನು ಉಲ್ಲಂಘಿಸಿದ ಮಕ್ಕಳು, (ಕಾನೂನಿನೊಡನೆ ಸಂಘರ್ಷಕ್ಕಿಳಿದ) ಆರೋಪ ಅಥವಾ ಅಪರಾಧಕ್ಕೆ ಒಳಗಾದ ಮಕ್ಕಳೊಡನೆ ಮಾನವೀಯವಾಗಿ ವರ್ತಿಸಬೇಕು. ಅವರಿಗೆ ತಮ್ಮ ಪರಿಸ್ಥಿತಿಯ ಅರಿವಾಗಿ ತಾವು ಮತ್ತೆ ಸಮಾಜದಲ್ಲಿ ಬೆರೆಯಲು ಅವಕಾಶವಾಗುವಂತೆ ಅವರ ಗೌರವಕ್ಕೆ, ಖಾಸಗಿ ಬದುಕಿಗೆ ಧಕ್ಕೆ ಆಗದಂತೆ ಎಲ್ಲರೂ ನಡೆದುಕೊಳ್ಳಬೇಕು.

ಇವುಗಳು ಸಾಧ್ಯವಾಗುವಂತೆ ಮಾಡಲು ಸರ್ಕಾರಗಳು ಈ ಮುಂದಿನ ಕ್ರಮಗಳನ್ನು ಕೈಗೊಳ್ಳಬೇಕು.

ರಾಷ್ಟ್ರೀಯ ಅಥವಾ ಅಂತಾರಾಷ್ಟ್ರೀಯ ಕಾಯ್ದೆ ಕಾನೂನುಗಳು ಯಾವುದಾದರೂ ನಿರ್ದಿಷ್ಟ ನಡವಳಿಕೆ, ಕ್ರಿಯೆ, ಚರ್ಯೆಯನ್ನು, ಲೋಪದೋಷಗಳನ್ನು ಅಪರಾಧ ಎಂದು ಪರಿಗಣಿಸದೇ ಇದ್ದಲ್ಲಿ ಅಂತಹ ಪ್ರಕರಣಗಳಿಗೆ ಮಕ್ಕಳನ್ನು ಸಿಲುಕಿಸಲಾಗದು.

ಕಾನೂನಿನನ್ವಯ ಯಾವುದಾದರೂ ವರ್ತನೆಯನ್ನು ದಂಡಾರ್ಹ ಅಪರಾಧ ಎಂದು ಪರಿಗಣಿಸಿ ಆ ಆಪಾದನೆಯ ಮೇಲೆ ಮಗುವನ್ನು ಬಂಧಿಸಿದ್ದಲ್ಲಿ ಈ ಮುಂದಿನ ಸೌಲಭ್ಯ, ಸ್ಥಾನಮಾನಗಳು ಮಗುವಿಗೆ ಖಂಡಿತ ದೊರಕಲೇಬೇಕು.

ಕಾನೂನು ರೀತ್ಯಾ ಅಪರಾಧ ಸಾಬೀತಾಗುವವರೆಗೆ ಮಗುವನ್ನು ನಿರ್ದೋಷಿ ಎಂದೇ ಪರಿಗಣಿಸಬೇಕು.

ಮಗುವಿನ ಮೇಲಿನ ಆಪಾದನೆಯ ಬಗ್ಗೆ, ಮಗುವಿನ, ಅವನ/ಅವಳ ಪೋಷಕರಿಗೆ, ಸಂಬಂಧಪಟ್ಟವರಿಗೆ ಆದಷ್ಟೂ ಬೇಗ ನೇರವಾಗಿ ತಿಳಿಸಬೇಕು. ಮಗುವಿನ ರಕ್ಷಣೆಗೆ ಕಾನೂನು ನೆರವು ಪಡೆಯುವ ಏರ್ಪಾಡು ಮಾಡಿಕೊಳ್ಳಲು ಸಮಯ ನೀಡಬೇಕು.

ಮಗುವಿನ ಹಿತದೃಷ್ಟಿಯಿಂದ ಮಗುವಿನ ವಯಸ್ಸು, ಪರಿಸ್ಥಿತಿ ಹಾಗೂ ಪೋಷಕರ ಹಿತದೃಷ್ಟಿಯಿಂದ ಅಪರಾಧ ಕುರಿತಾದ ವಿಚಾರಣೆ ಬೇಡವೆಂದು ಕಂಡು ಬಂದಲ್ಲಿ ಕೈಬಿಡಬೇಕು. ಇಲ್ಲವಾದಲ್ಲಿ ಆದಷ್ಟೂ ಬೇಗನೆ ಸೂಕ್ತವಾದ ನ್ಯಾಯ ಮಂಡಳಿಯೆದುರು ವಿಷಯ ಪ್ರಸ್ತಾವನೆ ಆಗಿ ನ್ಯಾಯ ತೀರ್ಮಾನ ಆಗಲೇಬೇಕು.

ಮಗುವಿನ ಮೇಲೆ ಒತ್ತಡ ಹೇರಿ ಸಾಕ್ಷಿ ನೀಡುವಂತೆ, ಪಾಟೀ ಸವಾಲಿಗೆ ಒಳಪಡುವಂತೆ ಅಥವಾ ಅಪರಾಧ ಒಪ್ಪಿಕೊಳ್ಳುವಂತೆ ಒತ್ತಾಯಿಸಬಾರದು. ತನ್ನ ಪರವಾಗಿ ಸಾಕ್ಷಿ ಹೇಳಿಕೆಗೆ ಜನರನ್ನು ಕರೆಸಲು ಅವಕಾಶ ಇರಬೇಕು.

ಮಗುವಿನಿಂದ ಕಾನೂನಿನ ಉಲ್ಲಂಘನೆ ಆಗಿದ್ದಲ್ಲಿ, ಹಾಗೆಂದು ನೀಡಿದ ತೀರ್ಪು, ಅದರನುಗುಣವಾದ ಕ್ರಮವನ್ನು ಸ್ವತಂತ್ರವಾದ, ನಿಷ್ಪಕ್ಷಪಾತವಾದ ಹಾಗೂ ಉನ್ನತವಾದ ನ್ಯಾಯ ಮಂಡಲಿಯ ವಿಮರ್ಶೆಗೆ ಮಗುವಿಗೆ ಹೋಗಲು ಅವಕಾಶವಿರಬೇಕು.

ವಿಚಾರಣೆಯ ಸಂದರ್ಭದಲ್ಲಿ ಬಳಕೆಯಾಗುತ್ತಿರುವ ಭಾಷೆ ಮಗುವಿಗೆ ಅರ್ಥವಾಗದೇ ಇದ್ದಲ್ಲಿ ಉಚಿತವಾಗಿ ಅನುವಾದದ ನೆರವು ಪಡೆಯಲು ಮಗುವಿಗೆ ಹಕ್ಕಿದೆ.

ಹೀಗೆ ನಡೆಯುವ ವಿಚಾರಣೆಯ ಎಲ್ಲ ಹಂತಗಳಲ್ಲಿ ತನ್ನ ವೈಯಕ್ತಿಕ ಗೋಪ್ಯತೆ, ಖಾಸಗಿತನಕ್ಕೆ ರಕ್ಷಣೆ ಹೊಂದುವ ಹಕ್ಕು ಮಗುವಿಗಿದೆ.

ಈ ಮೇಲಿನ ಚರ್ಚೆಗಳ ಆಧಾರದ ಮೇಲೆ ಮಕ್ಕಳ ಹಿತ ಕಾಪಾಡುವ ದೃಷ್ಟಿಯಿಂದ ಅಧಿಕಾರವರ್ಗ ಮತ್ತು ಸಂಸ್ಥೆಗಳನ್ನು ತುರ್ತಾಗಿ ರೂಪಿಸಬೇಕು.

ಒಂದು ನಿರ್ದಿಷ್ಟ ವಯೋಮಾನ ನಿಗದಿ ಮಾಡಿ ಅದರೊಳಗಿರುವ ಮಕ್ಕಳನ್ನು ಅಪರಾಧಿಗಳು ಎಂದು ಗುರುತಿಸದೇ ಇರುವುದು. ಈ ವಯೋಮಾನದ ಮಕ್ಕಳನ್ನು ನ್ಯಾಯಾಲಯಕ್ಕೆ ತರದೆ ಪ್ರತ್ಯೇಕ ವ್ಯವಸ್ಥೆಯಡಿಯಲ್ಲಿ ಮಾನವ ಹಕ್ಕುಗಳ ಹಿನ್ನಲೆಯಲ್ಲಿ ಮಕ್ಕಳಿಗೆ ನ್ಯಾಯ ಒದಗಿಸಲು ಯತ್ನಿಸಬೇಕು.

ಇವಿಷ್ಟು ಮೀರಿ ಮಕ್ಕಳು ತಪ್ಪು/ಅಪರಾಧ ಮಾಡಿರುವುದು ಸ್ಥಿರ ಪಟ್ಟಲ್ಲಿ ಅವರ ಬಂಧನ ವಿಮೋಚನೆಗಾಗಿ, ಸುಧಾರಣೆಗಾಗಿ, ಪ್ರೊಬೇಷನ್, ಸಲಹೆ, ಸೂಚನೆ, ಶಿಕ್ಷಣ, ವೃತ್ತಿಶಿಕ್ಷಣದ ವ್ಯವಸ್ಥೆ ಮಾಡಬೇಕು.



ಕಾನೂನು

- **ಭಾರತೀಯ ದಂಡ ಸಂಹಿತೆ** (Indian Penal Code-1860)

  ಸೆಕ್ಷನ್ 82 : 7 ವರ್ಷದೊಳಗಿನ ಯಾವುದೇ ಮಗು ಮಾಡಿದ ಯಾವುದೇ ತಪ್ಪನ್ನು ಅಪರಾಧ ಎಂದು ಪರಿಗಣಿಸಬಾರದು.

  ಸೆಕ್ಷನ್ 83 : ತಾನು ಮಾಡಿದ ಕ್ರಿಯೆಯ ಪರಿಣಾಮ ಏನು ಎಂದು ನಿರ್ಧರಿಸಲಾಗದ ಮನಃಸ್ಥಿತಿಯಿರುವ 7ರಿಂದ 12 ವರ್ಷದೊಳಗಿನ ಮಕ್ಕಳ ತಪ್ಪನ್ನು ಅಪರಾಧ ಎಂದು ಹೇಳಲಾಗದು.

- **ಮಕ್ಕಳಿಗೆ ನ್ಯಾಯ ಕಾನೂನು** (JJ Act-1986)

  ಸೆಕ್ಷನ್ 4 : ತಪ್ಪು ಮಾಡಿದ ಮಕ್ಕಳ-16 ವರ್ಷದೊಳಗಿನ ಗಂಡು ಹಾಗೂ 18 ವರ್ಷದೊಳಗಿನ ಹೆಣ್ಣು ಮಕ್ಕಳ-ವಿಚಾರಣೆಗಾಗಿ ವಿಶೇಷವಾದ ವ್ಯವಸ್ಥೆ ಮಾಡಬೇಕು.

  ಸೆಕ್ಷನ್ 18 : ಜಾಮೀನು ಪಡೆಯುವುದು ಮಕ್ಕಳ ಹಕ್ಕು. ತಪ್ಪು ಮಾಡಿದ ಮಕ್ಕಳನ್ನು ವಶಕ್ಕೆ ತೆಗೆದುಕೊಂಡಾಗ ಅವರನ್ನು ನಿರೀಕ್ಷಣಾ ಗೃಹಗಳಿಗೆ ಕಳಿಸಬೇಕು. ಪೋಲೀಸರ ವಶದಲ್ಲಿ ಇಡಬಾರದು.

  ಸೆಕ್ಷನ್ 24 : ಮಕ್ಕಳು ಹಾಗೂ ವಯಸ್ಕರನ್ನು ಒಂದೇ ಕಡೆ ಸೇರಿಸಿ ವಿಚಾರಣೆ ಮಾಡಬಾರದು.

- **ಅಪರಾಧ ದಂಡ ಸಂಹಿತೆ** (The Code of Criminal Procedure-1973)

  ಸೆಕ್ಷನ್ 360 : ಅಪರಾಧ ಮಾಡಿದ ವ್ಯಕ್ತಿಯು 21 ವರ್ಷ ಒಳಗಿನವರಾಗಿದ್ದರೆ, ಅವರಿಗೆ ಎಚ್ಚರಿಕೆ ನೀಡಿ, ಪ್ರೊಬೇಷನ್ ಮೇಲೆ ಬಿಡಬೇಕು. ಅಂತಹವರ ವಿಚಾರಣೆ ಜೆ.ಜೆ. ಕಾನೂನಿನಡಿಯಲ್ಲಿ ಆಗಬೇಕು.

  ಸೆಕ್ಷನ್ 22 : ತಪ್ಪು ಮಾಡಿದ ಮಕ್ಕಳು ದಂಡವನ್ನು ಕೊಡಲು ಆಗದಿದ್ದಲ್ಲಿ ಅಥವಾ ಭದ್ರತೆಯನ್ನು ಒದಗಿಸಲಾಗದಿದ್ದಲ್ಲಿ ಅವರನ್ನು ಬಂದೀಖಾನೆಗೆ ಕಳುಹಿಸಬಾರದು.

- **ತಪ್ಪು ಮಾಡಿದವರ ಮೇಲ್ವಿಚಾರಣೆ ಕಾನೂನು 1958** (The Probation of Offenders Act 1958)21 ವರ್ಷದೊಳಗಿನ ಮಕ್ಕಳು ಮೊದಲ ಬಾರಿ ಅಪರಾಧ ಮಾಡಿದ್ದಲ್ಲಿ, ಆ ಅಪರಾಧ ಬಹಳ ಗುರುತರವಾಗಿಲ್ಲದಿದ್ದಲ್ಲಿ ಅಂತಹವರನ್ನು ಒಳ್ಳೆಯ ನಡತೆಯಲ್ಲಿ ಬಾಳಿ ಎಂಬ ನಿರ್ದೇಶನದೊಂದಿಗೆ ಮೇಲ್ವಿಚಾರಣೆಯಲ್ಲಿ ಬಿಡಬೇಕು.

- **ಬೋರ್ಸ್ಟಲ್ ಶಾಲೆ ಕಾನೂನು** (Borstal School Act)16-21 ವರ್ಷದೊಳಗಿನ ಎಲ್ಲ ಗಂಡು ಮಕ್ಕಳಿಗೆ ಅನ್ವಯಿಸುತ್ತದೆ. (ಬೋರ್ಸ್ಟಲ್ ಎಂಬ ಪಟ್ಟಣದಲ್ಲಿ ತಪ್ಪು ಮಾಡಿದ ಯುವಕರಿಗೆ ಸನ್ಮಾರ್ಗಕ್ಕೆ ತರುವ ಶಾಲೆಯನ್ನು ಮೊದಲ ಬಾರಿಗೆ ಆರಂಭಿಸಲಾದುದರಿಂದ ಈ ಹೆಸರು ಬಂದಿದೆ.)

**4.8**



- ಪ್ರೊಬೇಷನ್ ಆಫ್ ಅಫೆಂಡರ್ಸ್ ಆಕ್ಟ್ 1958 ನೋಡಿ.
- ತಪ್ಪುಮಾಡಿದಮಕ್ಕಳೊಡನೆಕೆಲಸಮಾಡಿ ಅವರಸುಧಾರಣೆಗೆಸಹಾಯಮಾಡುವವ್ಯವಸ್ಥೆ ನಿಮ್ಮಊರಿನಲ್ಲಿದೆಯೇ ತಿಳಿದುಕೊಳ್ಳಿ.
- ತಪ್ಪು ಮಾಡಿದ ಮಕ್ಕಳೊಡನೆ ಸಂಬಂಧಪಟ್ಟವರ ವರ್ತನೆ ಹೇಗಿದೆ ?

◆ ನಿಮ್ಮ ಊರಿನಲ್ಲಿ ಕಳೆದ ನಾಲ್ಕು ವರ್ಷಗಳಲ್ಲಿ ಎಷ್ಟು ಮಕ್ಕಳು ತಪ್ಪು ಮಾಡಿದ ಪ್ರಕರಣಗಳು ದಾಖಲಾಗಿವೆ ನೋಡಿ. ಅದರಲ್ಲಿ ಪ್ರತ್ಯೇಕವಾಗಿ ಶ್ರೀಮಂತ ಮತ್ತು ಬಡವರ್ಗದ ಮಕ್ಕಳಿಗೆ ಸಂಬಂಧಿಸಿದ ಪ್ರಕರಣಗಳು ಎಷ್ಟು? ಯಾವ ಯಾವ ತಪ್ಪುಗಳಿಗೆ ಎಷ್ಟೆಷ್ಟು ಮಕ್ಕಳು ಗುರಿಯಾಗಿದ್ದಾರೆ ?

◆ ಸ್ಥಳೀಯ ಪ್ರೊಬೇಷನ್ ಆಫೀಸರನ್ನು ಭೇಟಿಯಾಗಿ ಹೆಚ್ಚು ವಿವರ ಪಡೆಯಿರಿ.

ನಮ್ಮ ಪರಿಸರದಲ್ಲಿ ಈ ಕುರಿತು ಇನ್ನೂ ಹೆಚ್ಚಿನ ಕೆಲಸ ಆಗಬೇಕಿದೆ. ಮುಂದೆ ತುರ್ತು ಸ್ಥಿತಿಗಳ ಬಗ್ಗೆ ನೋಡೋಣ.

**ತುರ್ತುಸ್ಥಿತಿಗಳು**

ನೈಸರ್ಗಿಕ ಮತ್ತು ಅಸ್ವಾಭಾವಿಕ ದುರಂತಗಳು, ತುರ್ತು ಪರಿಸ್ಥಿತಿ, ಸಶಸ್ತ್ರ ಸಂಘರ್ಷಗಳು ಉಂಟಾದಾಗ ಮಕ್ಕಳನ್ನು ಆದ್ಯತೆಯ ಮೇಲೆ ರಕ್ಷಿಸಬೇಕು. (10, 22, 25, 38, 39)

## ನಿರಾಶ್ರಿತ ಮಕ್ಕಳು



22

ಪರಿಚ್ಛೇದ

1. **ಯಾವುದಾದರೂ ಮಗು ಒಂಟಿಯಾಗಿ ಅಥವಾ ತನ್ನ ತಂದೆ, ತಾಯಿ, ಪೋಷಕರೊಡನೆ ತನ್ನ ಸ್ವಂತ ದೇಶವನ್ನು ತೊರೆದು ಬೇರೆ ದೇಶದಲ್ಲಿ ನಿರಾಶ್ರಿತನೆಂಬ ಸ್ಥಾನಮಾನ ಕೋರಿ ಬಂದಾಗ ಅವನಿಗೆ/ಳಿಗೆ ಮಾನವೀಯ ದೃಷ್ಟಿಯಿಂದ ಆಶ್ರಯ ನೀಡಿ ಮಾನವ ಹಕ್ಕುಗಳ ಹಿನ್ನೆಲೆಯಲ್ಲಿ ನೆರವು ನೀಡಬೇಕು.**
2. **ನಿರಾಶ್ರಿತ ಮಕ್ಕಳಿಗೆ ಸೂಕ್ತ ರಕ್ಷಣೆ, ನೆರವು, ತನ್ನ ತಂದೆ ತಾಯಿ ಅಥವಾ ಕುಟುಂಬವನ್ನು ಪತ್ತೆ ಹಚ್ಚಿ ಕೂಡಿಸುವ ಜವಾಬ್ದಾರಿ ಸರಕಾರಗಳದ್ದು. ಇದರಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಪಾತ್ರವೂ ಇದೆ. ಮಗುವಿನ ತಂದೆ, ತಾಯಿ, ಸಂಬಂಧಿಗಳ ಪತ್ತೆ ಆಗದಿದ್ದಲ್ಲಿ ಆ ಮಗುವಿಗೆ ತಾತ್ಕಾಲಿಕ ಅಥವಾ ಖಾಯಂ ಆಗಿ ರಕ್ಷಣೆ ಮತ್ತು ಒಡಂಬಡಿಕೆಯಲ್ಲಿ ಹೇಳಿರುವ ಹಕ್ಕುಗಳನ್ನು ಒದಗಿಸಬೇಕು.**

◆ **ಯಾವುದೇ ವಿಶೇಷ ಕಾನೂನು ಇಲ್ಲ.**



ಕಾನೂನು

ಬೆಂಗಳೂರಿನ ಬಳಿ ಶ್ರೀಲಂಕಾದ ತಮಿಳು ನಿರಾಶ್ರಿತರ ಮಕ್ಕಳು ಆಹಾರವಿಲ್ಲದೆ ಸೊರಗುವ ಪ್ರಕರಣಗಳು ಆಗಾಗ ಪತ್ರಿಕೆಯಲ್ಲಿ ಬರುತ್ತಿರುತ್ತವೆ. ಪರಿಚ್ಛೇದ 22ರಲ್ಲಿ ಹೇಳಿರುವುದು ಅಂತಾರಾಷ್ಟ್ರೀಯ ಮಟ್ಟದ ನಿರಾಶ್ರಿತರಿಗೆ ಮಾತ್ರ ಸೀಮಿತವಲ್ಲ.

ನಮ್ಮದೇ ದೇಶದಲ್ಲಿ ನಿಮ್ಮ ಊರಿನ ಸಮೀಪ ಕಾಡು ನಾಶ ಅಥವಾ ರಕ್ಷಣೆ, ಬೃಹತ್ ಯೋಜನೆ, ಪರಿಸರ ವಿಕೋಪ ಇತ್ಯಾದಿಗಳ ಕಾರಣದಿಂದ ನಿರಾಶ್ರಿತರಾದವರ ಬಗ್ಗೆ ವಿಷಯ ಸಂಗ್ರಹಿಸಿ. ಕೊಳಗೇರಿಗಳನ್ನು ಆಗಾಗ ಖಾಲಿ ಮಾಡಿಸಿದಾಗ ಅಲ್ಲಿದ್ದ ಮಕ್ಕಳ ಮೇಲೆ ಎಂತಹ ಪರಿಣಾಮ ಬೀರುತ್ತದೆ ಗಮನಿಸಿ. ಇವುಗಳನ್ನು ವಿಶ್ಲೇಷಿಸಿದಾಗ ಮಕ್ಕಳ ಹಕ್ಕುಗಳನ್ನು ಎಷ್ಟರ ಮಟ್ಟಿಗೆ ಮಾನ್ಯ ಮಾಡಲಾಗುತ್ತದೆ ಎಂಬುದು ಅರಿವಾಗುತ್ತದೆ. ಇವುಗಳಲ್ಲಿ ನ್ಯೂನತೆ ಕಂಡು ಬಂದಲ್ಲಿ ಸರಿಯಾದ ಅಂಕಿ-ಅಂಶ ದಾಖಲೆಗಳ ಸಮೇತ ಸರ್ಕಾರ ಹಾಗೂ ವಿಶ್ವಸಂಸ್ಥೆಗೆ ತಿಳಿಸಿ.

ನೀವೊಂದು ಸ್ವಯಂ ಸೇವಾ ಸಂಸ್ಥೆಯಾಗಿದ್ದಲ್ಲಿ ಸಹಾಯ ಸಂಸ್ಥೆಯಾಗಿದ್ದಲ್ಲಿ ಅಥವಾ ಸರ್ಕಾರಿ ಇಲಾಖೆಯಾಗಿದ್ದಲ್ಲಿ ಮುಂದಿನದನ್ನು ಗಮನಿಸಿ.

◆ ಮಕ್ಕಳ ಮೇಲೆ ಆಗುತ್ತಿರುವ ಶೋಷಣೆ ತಪ್ಪಿಸಲು ಯಾರು ಯಾರು ಜವಾಬ್ದಾರರು ?

◆ ತುರ್ತು ಸ್ಥಿತಿಯಲ್ಲಿರುವ ಮಕ್ಕಳು ಯಾರು ? ಅವರ ಶ್ರೇಯೋಭಿವೃದ್ಧಿಗಾಗಿ ಯಾರು ಏನು ಕ್ರಮ ಕೈಗೊಳ್ಳುತ್ತಿದ್ದಾರೆ ? ಅವುಗಳ ಗುಣಮಟ್ಟ ಹೇಗಿದೆ ?

◆ ಯಾವ ಮಕ್ಕಳು ಯಾವುದೇ ರಕ್ಷಣೆ ದೊರೆಯದೆ ಉಳಿದು ಹೋಗಿದ್ದಾರೆ ?

ಮುಂದೆ ಮಗುವಿನ ಅಭಿವೃದ್ಧಿಗೆ ಸಹಾಯವಾಗುವ ಪರಿಚ್ಛೇದಗಳನ್ನು ಗಮನಿಸೋಣ.

# ಮಗುವಿನ ಹಿತ ದೃಷ್ಟಿ



ಮಕ್ಕಳ ಹಕ್ಕುಗಳ ಒಡಂಬಡಿಕೆಯ ಪರಿಚ್ಛೇದಗಳನ್ನು ಗಮನಿಸಿದಾಗ ಅಲ್ಲಲ್ಲಿ '....ಮಗುವಿನ ಹಿತದೃಷ್ಟಿಯಿಂದ.....' ಎಂಬ ಪದ ಪಂಕ್ತಿಗಳು ಕಾಣುತ್ತವೆ. ಇಡೀ ಒಡಂಬಡಿಕೆಯನ್ನು ರೂಪಿಸಿರುವುದೇ ಮಕ್ಕಳ ಹಿತದೃಷ್ಟಿ, ಹಿತರಕ್ಷಣೆಗಾಗಿ ಎಂದಿರುವಾಗ, ಈ ಪದವನ್ನು ಪ್ರತ್ಯೇಕವಾಗಿ, ವಿಶೇಷವಾಗಿ ಬಳಸಿರುವುದಕ್ಕೆ ಕಾರಣ ಏನಿರಬಹುದು ಎಂದು ನೋಡಬೇಕಾಗಿದೆ.

ಇದು ಮುಖ್ಯವಾಗಿ ಕಾಣುವುದು *ಪರಿಚ್ಛೇದ 9 'ಕುಟುಂಬದಿಂದ ಮಗು ಬೇರ್ಪಟ್ಟಾಗ'; 18- 'ಮಗುವಿನ ಶ್ರೇಯೋಭಿವೃದ್ಧಿಗಾಗಿ, ಮಕ್ಕಳನ್ನು ಬೆಳೆಸುವ, ಪೋಷಿಸುವ ಜವಾಬ್ದಾರಿ ಹೊರಬೇಕಿರುವ ಪೋಷಕರ ಪಾತ್ರ.......;' 20, 21- 'ಮಗುವನ್ನು ದತ್ತು ನೀಡಬೇಕಾದಾಗ ಮತ್ತು ಅಂತಹ ವ್ಯವಸ್ಥೆಗಳ ನಿರ್ಮಾಣ......;' 37-40- 'ಮಕ್ಕಳೊಡನೆ ವ್ಯವಹರಿಸುವಾಗ ಪೋಲೀಸ್ ಹಾಗೂ ನ್ಯಾಯಾಂಗಗಳ ಪಾತ್ರ.'*

ಮೇಲೆ ಹೇಳಿರುವುದಕ್ಕೆಲ್ಲಾ ಆಧಾರವಾಗಿರುವುದು ಪರಿಚ್ಛೇದ 3ರಲ್ಲಿ ಹೇಳಿರುವ ವಿಚಾರಗಳು. ಅವೆಂದರೆ ;-



3 ಪರಿಚ್ಛೇದ

**1. ಸಾರ್ವಜನಿಕ ಇಲ್ಲವೆ ಖಾಸಗಿ ಸಮಾಜ ಕಲ್ಯಾಣ ಸಂಸ್ಥೆ, ನ್ಯಾಯಾಲಯ, ಆಡಳಿತ ಮಂಡಳಿ, ಪ್ರಾಧಿಕಾರಗಳು ಅಥವಾ ಶಾಸನಾಂಗ ಮಕ್ಕಳನ್ನು ಕುರಿತಾಗಿ ತೆಗೆದುಕೊಳ್ಳುವ ಯಾವುದೇ ನಿರ್ಧಾರ, ಕಾರ್ಯಕ್ರಮಗಳು ಮಕ್ಕಳ ಹಿತದೃಷ್ಟಿಗೆ ಮೊದಲ ಆದ್ಯತೆ ನೀಡಬೇಕು.**

**2. ಮಕ್ಕಳನ್ನು ಸಾಕಿ ಸಲಹುವ ಜವಾಬ್ದಾರಿ ವಹಿಸಿಕೊಂಡ ತಂದೆ-ತಾಯಿ, ಕಾನೂನಿನನ್ವಯ ನೇಮಿಸಲಾದ ಪೋಷಕರು, ಸಂಸ್ಥೆ-ಇವರ ಹಕ್ಕು ಮತ್ತು ಜವಾಬ್ದಾರಿಗಳನ್ನು ಗಮನದಲ್ಲಿಟ್ಟುಕೊಂಡು ಮಕ್ಕಳ ರಕ್ಷಣೆ ಆರೈಕೆಗಾಗಿ ಸೂಕ್ತವಾದ ಆಡಳಿತ ಹಾಗೂ ಶಾಸನಾತ್ಮಕ ಕ್ರಮಗಳನ್ನು ಸರಕಾರಗಳು ಕೈಗೊಳ್ಳಬೇಕು.**

**3. ಮಕ್ಕಳ ಆರೈಕೆ, ಲಾಲನೆ ಪಾಲನೆ, ರಕ್ಷಣೆಯ ಜವಾಬ್ದಾರಿ ತೆಗೆದುಕೊಂಡಿರುವ ಸ್ವಯಂ ಸೇವಾ ಸಂಸ್ಥೆಗಳು, ಸಂಘಗಳು, ಅರ್ಹಸಂಸ್ಥೆಗಳು-ಸರ್ಕಾರಗಳು ನೇಮಿಸುವ, ನಿಗದಿ ಮಾಡಿದ ಮಾನಕಗಳು, ಮಟ್ಟಗಳನ್ನು ಅನುಸರಿಸಿ ಸುರಕ್ಷತೆ, ಆರೋಗ್ಯ, ಸೂಕ್ತ ಸಂಖ್ಯೆಯ ತರಬೇತಿ ಹೊಂದಿದ ಸಿಬ್ಬಂದಿ ಹಾಗೂ ಮೇಲ್ವಿಚಾರಣಾ ವ್ಯವಸ್ಥೆಗಳನ್ನು ಮಾಡಬೇಕು.**

ಮಕ್ಕಳನ್ನು ಕುರಿತಾದ ಎಲ್ಲ ವಿಚಾರ ವಿಮರ್ಶೆ, ಕಾರ್ಯಕ್ರಮಗಳಿಗೆ ಮೇಲೆ ಹೇಳಿರುವ ಪರಿಚ್ಛೇದವೇ ಮೂಲ ಮಂತ್ರ. ಇಡೀ ಒಡಂಬಡಿಕೆಯಲ್ಲಿರುವ ಹಾಗೂ ಒಂದು ವೇಳೆ ಇಲ್ಲಿ ಹೇಳಿಲ್ಲದ ಯಾವುದಾದರೂ ಸಂಗತಿ ಇದ್ದದ್ದೇ ಆದಲ್ಲಿ ಪರಿಚ್ಛೇದ 3.1ನ್ನು ಆಧಾರವಾಗಿಟ್ಟುಕೊಂಡು ಪರಿಸ್ಥಿತಿಯನ್ನು ಅವಲೋಕಿಸಬೇಕು. ''ಮಕ್ಕಳ ಹಿತದೃಷ್ಟಿಯಿಂದ'' ಎಂದು ನೋಡುವುದು ಭಾರತದಂತಹ ದೇಶಕ್ಕೆ ಹೊಸತೇನೂ ಅಲ್ಲ. ನಮ್ಮ ಅನೇಕ ಕಾನೂನುಗಳಲ್ಲಿ, ಶಾಸನಗಳಲ್ಲಿ ಕೌಟುಂಬಿಕ ವಿಚಾರಗಳಲ್ಲಿ, ಮಕ್ಕಳ ರಕ್ಷಣೆ ಪಾಲನೆಯ ಸಂದರ್ಭಗಳಲ್ಲಿ 'ಮಕ್ಕಳ ಹಿತದೃಷ್ಟಿ'ಯಿಂದ ನಿರ್ಧಾರಗಳನ್ನು ಕೈಗೊಳ್ಳಬೇಕೆಂಬುದು ಇದ್ದೇ ಇದೆ.

ಮಕ್ಕಳ ಹಕ್ಕುಗಳ ರಚನೆ ಮಾಡಿದ ಸಮಿತಿ 'ಮಗುವಿನ ಹಿತದೃಷ್ಟಿ' ಎಂಬುದನ್ನು ಇಡೀ ಒಡಂಬಡಿಕೆಗೆ ದಾರಿ ದೀಪಗಳು, ದಾರಿಸೂಚಕಗಳು' ಎಂದು ಕರೆದಿದೆ. ಇದು ಒಡಂಬಡಿಕೆಯಲ್ಲಿ ಬೆಸೆದು ಹೋಗಿರುವುದು ಸ್ಪಷ್ಟವಾಗಿ ಕಾಣುತ್ತದೆ. 'ಮಗುವಿನ ಹಿತದೃಷ್ಟಿ' ಎಂಬ ಅಂಶವನ್ನು ಒಡಂಬಡಿಕೆಗೆ ಸಹಿ ಮಾಡಿರುವ 190 ಕ್ಕೂ ಹೆಚ್ಚು ದೇಶಗಳು ಒಪ್ಪಿಕೊಂಡಿವೆ. ಅವುಗಳ ಈ ನಿಲುವು, ವಿಚಾರ ಕೆಲವು ಜಿಜ್ಞಾಸೆಗಳಿಗೆ ಕಾರಣವಾಗಿದೆ. ಮಗುವಿನ ಹಿತದೃಷ್ಟಿ ಎಂದು ಪರಿಗಣಿಸುವವರು ಯಾರು ? ಒಂದು ಸಂಸ್ಥೆ, ಸರ್ಕಾರ, ನ್ಯಾಯಾಲಯ ಮಗುವಿನ ಭವಿಷ್ಯದಲ್ಲಿ ಒಳ್ಳೆಯದಾಗಲೆಂದು ನಿರ್ಧಾರ ಕೈಗೊಂಡರೂ ಅದರ ಫಲಿತಾಂಶ ಗೊತ್ತಾಗುವುದು ಮಗು ಬೆಳೆದು ದೊಡ್ಡದಾದಾಗ ಮಾತ್ರ.

ಉದಾ : ಪರಿಚ್ಛೇದ 9ರಲ್ಲಿ '....ಮಗು ತನ್ನ ನಿಜವಾದ ತಂದೆ-ತಾಯಿಯೊಡನೆ ಇರುವುದು ಅದರ ಅಭಿವೃದ್ಧಿಗೆ ಒಳಿತಲ್ಲ ಎಂದಾದಲ್ಲಿ ಮಗುವನ್ನು ಅವರಿಂದ ಬೇರ್ಪಡಿಸಬಹುದು........ತಂದೆ ತಾಯಿಯವರು ಬೇರ್ಪಟ್ಟಾಗ ಮಗು ಅವರೊಂದಿಗೆ ಸಂಪರ್ಕ ಇಟ್ಟುಕೊಂಡಲ್ಲಿ ಅದರ ಬದುಕಿಗೆ ಬಾಧಕವಾಗುವುದು ಎಂದಾದಲ್ಲಿ ಹಾಗೆ ಸಂಪರ್ಕ ಹೊಂದುವುದು ಬೇಡ....ತಂದೆ ತಾಯಿಯರು ಸೆರೆವಾಸ, ಗಡಿಪಾರು, ದೇಶದಿಂದ ಉಚ್ಚಾಟನೆಗೊಂಡಿದ್ದಾಗ ಅವರ ಬಗ್ಗೆ ಮಾಹಿತಿ ನೀಡಬೇಕು. ಆದರೆ ಮಗುವಿನ ಮೇಲೆ ಪ್ರತಿಕೂಲ ಪರಿಣಾಮ ಬೀರುವುದು ಎಂದಾದಲ್ಲಿ ಮಗುವಿಗೆ ಅಂತಹ ವಿವರ ನೀಡಬಾರದು.

ಇದನ್ನು ಏಕಪಕ್ಷೀಯ ದೃಷ್ಟಿ ಎಂದು ಕರೆಯುವವರೂ ಇದ್ದಾರೆ. ಮಗುವಿಗೆ ಇದು ಒಳಿತು ಎಂದು ತಿಳಿಯಪಡಿಸುವ ವಿಧಿ-ವಿಧಾನಗಳು ಇನ್ನೂ ಗಟ್ಟಿಯಾಗಿಲ್ಲ.. ಇವುಗಳನ್ನು ಕುರಿತು ಸಂಶೋಧನೆ, ವಿಚಾರ ವಿಮರ್ಶೆಯ ಅಗತ್ಯವಿದೆ.



18 ಅನುಚ್ಛೇದ

## ಪೋಷಕರ ಜವಾಬ್ದಾರಿ

ತಮ್ಮ ಮಕ್ಕಳನ್ನು ಸಾಕಿ ಸಲಹುವುದು, ಬೆಳೆಸುವುದು ತಂದೆತಾಯಿಗಳ ಜವಾಬ್ದಾರಿ. ಇದು ಕಾನೂನು ಬದ್ಧ ಪೋಷಕರಿಗೂ ಅನ್ವಯಿಸುತ್ತದೆ. ಪೋಷಕರು ಅಥವಾ ತಂದೆ-ತಾಯಿಯರು ಈ ಜವಾಬ್ದಾರಿಯನ್ನು ಮಗುವಿನ ಹಿತದೃಷ್ಟಿಯಿಂದ ವಹಿಸಿಕೊಳ್ಳತಕ್ಕದ್ದು.

ಒಡಂಬಡಿಕೆಯಲ್ಲಿ ಹೇಳಿರುವ ಎಲ್ಲ ಹಕ್ಕುಗಳು ಮಕ್ಕಳಿಗೆ ದೊರಕಬೇಕೆಂದಿದ್ದಲ್ಲಿ ಅಗತ್ಯವಾದೆಡೆ ಪೋಷಕರಿಗೆ, ತಂದೆತಾಯಿಯರಿಗೆ ಕೆಲವು ಸವಲತ್ತುಗಳನ್ನು ಸರ್ಕಾರ ತನ್ನ ವ್ಯವಸ್ಥೆ ಅಥವಾ ಸೇವಾ ಸಂಸ್ಥೆಗಳ ಮೂಲಕ ಒದಗಿಸಬೇಕು.

ದುಡಿಯುವ ಪೋಷಕರಿಗೆ ಅವರ ಮಕ್ಕಳ ಲಾಲನೆ ಪಾಲನೆಗಾಗಿ ವ್ಯವಸ್ಥೆ ಮಾಡಿಕೊಡುವುದು ಅವರ ಹಕ್ಕುಗಳಲ್ಲಿ ಒಂದು. ಇದಕ್ಕಾಗಿ ಎಲ್ಲೆಲ್ಲಿ ದುಡಿಯುವ ಪೋಷಕರು ಇದ್ದಾರೋ ಅಲ್ಲೆಲ್ಲಾ ಶಿಶುಪಾಲನಾ ಕೇಂದ್ರಗಳನ್ನು ಮತ್ತು ಆ ರೀತಿಯ ಸೇವಾ ಸೌಲಭ್ಯಗಳನ್ನು ಸರ್ಕಾರ ವ್ಯವಸ್ಥೆ ಮಾಡಬೇಕು.



ಕಾನೂನು

- ಹಿಂದೂ ಅಪ್ರಾಪ್ತ ವಯಸ್ಕರು ಮತ್ತು ಪೋಷಕರ ಕಾನೂನು (Hindu Minority & Guardianship Act-1956) ಸೆಕ್ಷನ್ 5ರ ಪ್ರಕಾರ 5 ವರ್ಷದೊಳಗಿನ ಮಗುವಿಗೆ ತಾಯಿಯೇ ಸ್ವಾಭಾವಿಕ ಪೋಷಕಿ. ವಿವರಗಳಿಗೆ ಪರಿಚ್ಛೇದ 9 ನೋಡಿ. (ಪುಟ 20)



### 5.1

- ನಿಮ್ಮ ಪರಿಸರದಲ್ಲಿ ದುಡಿಯುವ ಮಹಿಳೆಯರು ಇದ್ದಲ್ಲಿ-ಕೃಷಿ, ತೋಟ, ಗಣಿ, ಕೈಗಾರಿಕೆ, ರಸ್ತೆ ನಿರ್ಮಾಣ, ಕಟ್ಟಡ ನಿರ್ಮಾಣ (ಇದು ಖಾಸಗಿ ಅಥವಾ ಸರ್ಕಾರದ ಕೆಲಸ ಆಗಿರಬಹುದು) ಅಲ್ಲೆಲ್ಲಾ ಶಿಶು ಪಾಲನಾ ಕೇಂದ್ರಗಳು ಇವೆಯೇ ಇಲ್ಲವೇ ನೋಡಿ. ಆ ಬಗ್ಗೆ ಸಂಬಂಧಿಸಿದವರಿಗೆ ಮಾಹಿತಿ ನೀಡಿ.
- ಹೆರಿಗೆ ನಂತರದ ಹಲವಾರು ಸೌಲಭ್ಯಗಳು ಮಹಿಳೆಯರಿಗೆ ಇವೆ. ಇವುಗಳ ಪರಿಚಯ ಮಾಡಿಕೊಳ್ಳಿ. ಅದರ ಸೌಲಭ್ಯ ಮಹಿಳೆಯರಿಗೆ ಸಿಗುತ್ತಿದೆಯೆ ನೋಡಿ.



20 ಅನುಚ್ಛೇದ

## ನೆಲೆ ತಪ್ಪಿದ ಮಕ್ಕಳು

ತನ್ನ ಸ್ವಂತ ಕುಟುಂಬದಿಂದ ದೂರವಿರುವುದು ಮಗುವಿನ ಹಿತದೃಷ್ಟಿಯಿಂದ ಒಳ್ಳೆಯದೆಂದರೆ ಹಾಗೆ ಮಾಡಬೇಕು.

21 ಅನುಚ್ಛೇದ

## ದತ್ತು

ಮಕ್ಕಳನ್ನು ದತ್ತು ನೀಡುವುದಾದರೆ ಅದು ಮಗುವಿನ ಹಿತದೃಷ್ಟಿಯಿಂದ ಆಗಬೇಕು.



ಕಾನೂನು

ಮಕ್ಕಳಿಗೆ ನ್ಯಾಯ ಕಾನೂನು (JJ Act-1986)ರ ಸೆಕ್ಷನ್ 4 : ರಾಜ್ಯ ಸರ್ಕಾರಗಳು ಮಕ್ಕಳ ಕಲ್ಯಾಣ ಮಂಡಳಿಗಳನ್ನು ನೇಮಿಸಬೇಕು.

ಸೆಕ್ಷನ್11 : ಬಾಲಗೃಹಗಳನ್ನು ನಿರ್ಮಿಸಿ ಅಲ್ಲಿಗೆ ಬರುವ ಮಕ್ಕಳಿಗೆ ಶಿಕ್ಷಣ, ಸಲಹೆ, ಆರೋಗ್ಯ ರಕ್ಷಣೆ, ವೃತ್ತಿ ತರಬೇತಿಯೊಡನೆ ನ್ಯಾಯ ಒದಗಿಸುವ ಕೆಲಸ ಮಾಡಬೇಕು.







ಸದ್ಯದಲ್ಲಿ ಇವುಗಳಲ್ಲಿ ಸ್ವಯಂಸೇವಾ ಸಂಘಗಳ ಪ್ರತಿನಿಧಿಗಳ ಪಾತ್ರ ತೀರಾ ಕಡಿಮೆ. ಸ್ವಯಂಸೇವಾ ಸಂಸ್ಥೆಗಳಿಗೂ ಅವಕಾಶ ಕೊಡುವ, ಮಕ್ಕಳಿಗೆ ನ್ಯಾಯ ಒದಗಿಸುವ ಉದ್ದೇಶದಿಂದ ರಚಿತವಾಗಿರುವ ಮಂಡಳಿಯು ಇನ್ನೂ ಹೆಚ್ಚು ಅರ್ಥಪೂರ್ಣವಾಗಿರಬೇಕು. ಸ್ವಯಂಸೇವಾ ಸಂಘಗಳಿಗೂ ಸಹ ಬಾಲಗೃಹಗಳನ್ನು ನಡೆಸುವ ಅವಕಾಶ ನೀಡಬೇಕಿದೆ.

- **ಹಿಂದೂ ದತ್ತು ಕಾನೂನು** (Hindu Adoption & Maintenance Act-1956) ಸೆಕ್ಷನ್ 7-12: 15 ವರ್ಷದೊಳಗಿನ ಮದುವೆಯಾಗದ ಗಂಡು ಅಥವಾ ಹೆಣ್ಣು ಮಗುವನ್ನು ಹಿಂದೂ ವಯಸ್ಕರು ದತ್ತು ತೆಗೆದುಕೊಳ್ಳಬಹುದು. ಭಾರತದಲ್ಲಿ ಹಿಂದೂಗಳಲ್ಲದವರು-ಮುಸುಲ್ಮಾನರು, ಪಾರ್ಸಿ, ಕ್ರಿಶ್ಚಿಯನ್‌ರಿಗೆ ದತ್ತು ನೀಡುವ ಕಾನೂನು ವ್ಯವಸ್ಥೆ ಇಲ್ಲ.

  1982ರಲ್ಲಿ ಒಂದೇ ರೀತಿಯ ದತ್ತು ಕಾನೂನು ಕುರಿತು ಪ್ರಸ್ತಾವನೆಯನ್ನು ಸಂಸತ್ತಿನ ಮುಂದೆ ತರಲಾಯಿತು. ಆದರೆ ಅದನ್ನು ಕುರಿತು ಯಾವುದೇ ಬೆಳವಣಿಗೆ ಆಗಿಲ್ಲ.



ಟಿಪ್ಪಣಿ

**5.2**

- ಅನೈತಿಕ ವ್ಯವಹಾರಗಳ ಪ್ರತಿಬಂಧನೆ ಕಾನೂನಿನಡಿ, ವೇಶ್ಯಾವೃತ್ತಿಯಲ್ಲಿರುವ ಮಗುವನ್ನು ಬಂಧಿಸಿದಾಗ ; ಕೆಲವು ಕುಟುಂಬಗಳನ್ನು, ಕೊಲೆ, ದರೋಡೆ, ಮಾದಕವಸ್ತುಗಳ ಸಾಗಾಣಿಕೆಯ ಆಪಾದನೆಯ ಮೇಲೆ ಬಂಧಿಸಿದಾಗ ಅಥವಾ ದೇಶದ ವಿರುದ್ಧ ಪಿತೂರಿ ನಡೆಸುತ್ತಿರುವ ಕುಟುಂಬಗಳನ್ನು ಬಂಧಿಸಿದಾಗ ಅವರ ಮಕ್ಕಳನ್ನು ಸೂಕ್ತರಕ್ಷಣೆ, ಮಾರ್ಗದರ್ಶನಕ್ಕಾಗಿ ಪೋಷಕರಿಂದ ಬೇರ್ಪಡಿಸಿ, ಸರ್ಕಾರಿ ಬಾಲಮಂದಿರ ಅಥವಾ ಸೂಕ್ತ ಸಂಸ್ಥೆಗಳಲ್ಲಿ ಇಡಲಾಗುತ್ತದೆ. ಇಲ್ಲಿ ಒಂದು ಪ್ರಶ್ನೆ ಏಳುತ್ತದೆ. ಮಕ್ಕಳನ್ನು ನೋಡಿಕೊಳ್ಳಲೆಂದು ನಿಯೋಜಿಸಿರುವ ಈ ಸಂಸ್ಥೆಗಳು ಎಷ್ಟರ ಮಟ್ಟಿಗೆ ಸೂಕ್ತವಾದವು ? ಮಕ್ಕಳ ವಿಕಾಸಕ್ಕೆ ಹೇಗೆ ಸಹಾಯ ನೀಡಬಹುದು ? ವ್ಯವಸ್ಥೆಯ ಗುಣಮಟ್ಟವನ್ನು ನೋಡದೆ ಮಕ್ಕಳನ್ನು ಇಲ್ಲಿ ದೂಡುವುದು/ಇಡುವುದು ಸರಿಯೆ ?
- ಪರದೇಶಕ್ಕೆ ದತ್ತುಹೋದಲ್ಲಿ ಅದರ ಪರಿಣಾಮ ಮಗುವಿಗೆ ಗೊತ್ತಾಗುವುದು ದೊಡ್ಡದಾದಾಗಲೇ. ಭಾರತದಂತಹ ದೇಶದಲ್ಲಿ ವಿದೇಶೀ ದತ್ತುವಿನ ಬಗ್ಗೆ ಬಿಸಿ ಬಿಸಿ ಚರ್ಚೆ ಆಗುತ್ತಿದೆ. ಒಡಂಬಡಿಕೆಯಲ್ಲಿ ಮಗುವಿನ ಸಾಂಸ್ಕೃತಿಕ, ಧಾರ್ಮಿಕ ಹಿನ್ನೆಲೆಗಳಿಗೆ ಎರವಾಗಬಾರದು ಎಂದು ಪ್ರಸ್ತಾಪಿಸಲಾಗಿದೆ. ವಿದೇಶೀ ದತ್ತುವಿಗೆ ಹೇಗೆ ಒಪ್ಪಿಗೆ ನೀಡುವುದು ಎಂದೂ ಪ್ರಶ್ನಿಸಬಹುದು.



37

ಅನುಚ್ಛೇದ

## ಚಿತ್ರಹಿಂಸೆ ಮತ್ತು ಮರಣ ದಂಡನೆ

**...ಮಗುವನ್ನು ಯಾವುದೇ ಕಾರಣದಿಂದ ಬಂಧಿಸಿದ್ದಲ್ಲಿ, ಮಗು ತನ್ನ ಕುಟುಂಬದವರೊಡನೆ ಸಂಪರ್ಕ ಹೊಂದಿರುವುದು ಮಗುವಿನ ಹಿತದೃಷ್ಟಿಯಿಂದ ಒಳ್ಳೆಯದಾದಲ್ಲಿ ಅದಕ್ಕೆ ಅವಕಾಶವಿದೆ.**



40

ಅನುಚ್ಛೇದ

## ಮಕ್ಕಳಿಗೆ ನ್ಯಾಯ

**ತಪ್ಪು ಮಾಡಿದ ಮಗುವಿನ ವಿಚಾರಣೆ ಮಾಡುವುದು ಮಗುವಿನ ಹಿತದೃಷ್ಟಿಯಿಂದ ಒಳಿತಲ್ಲವಾದರೆ ವಿಚಾರಣೆ ಮಾಡುವ ಆವಶ್ಯಕತೆಯಿಲ್ಲ.**



ಅಭ್ಯಾಸ

**5.3**

- ನಿಮ್ಮ ಪರಿಸರದಲ್ಲಿ ಯಾವುದಾದರೂ ಮಗುವನ್ನು ಪೋಲೀಸರು ಬಂಧಿಸಿದ ಪ್ರಕರಣಗಳು ಇವೆಯೆ ? ಆಗ ಮಗು ತನ್ನ ಕುಟುಂಬದೊಡನೆ ಸಂಪರ್ಕ ಇಟ್ಟುಕೊಳ್ಳಲು ಅವಕಾಶ ಸಿಕ್ಕಿತೆ ? ವಿಚಾರಣೆಯ ಹಿಂಸೆ ಅನುಭವಿಸಿದ ಮಕ್ಕಳ ಬಗ್ಗೆ ತಿಳಿದಿದೆಯೇ ? ಆಗ ಏನಾಯಿತೆಂಬ ವಿವರ ಸಂಗ್ರಹಿಸಿ. ಇವುಗಳ ಪರಿಣಾಮ ಏನು ತಿಳಿಯಿರಿ.

  ಇದೆಲ್ಲದರ ಜೊತೆಯಲ್ಲಿ 'ಮಗುವಿನ ಹಿತದೃಷ್ಟಿ' ಎಂದು ಹೇಳುತ್ತಾ ಆ ದೇಶದ ಸಾಂಸ್ಕೃತಿಕ ಪರಿಸರಗಳಿಗೆ ಧಕ್ಕೆ ಆದಲ್ಲಿ ಒಡಂಬಡಿಕೆಯ ಕೆಲವು ವಿಚಾರಗಳನ್ನು ಬದಲಿಸುವ ಅವಕಾಶವೂ ಬಂದು ಹೋಗಿದೆ ಎಂಬ ಹುಯಿಲು ಕೇಳಿ ಬರುತ್ತಿದೆ. ಇದು ಇಡೀ ಒಡಂಬಡಿಕೆಗೆ ಹಿಂಬಾಗಿಲಿನ ಪ್ರವೇಶ ಹಾಗೂ ಒಡಂಬಡಿಕೆಯನ್ನು ಒಪ್ಪಿಯೂ ಸಹ ಅದರಂತೆ ನಡೆದುಕೊಳ್ಳದೆ ಇರಲು ಹುಡುಕುವ ನೆಪ ಎನ್ನಬಹುದು. ನಿಮ್ಮ ಅಭಿಪ್ರಾಯ ಏನು ?

## ಇತರ ಪರಿಚ್ಛೇದಗಳು

ಮುಖ್ಯ ಲೇಖನಗಳಲ್ಲಿ ಚರ್ಚೆಗೆ ಬಾರದಿರುವ ಕೆಲವು ಪರಿಚ್ಛೇದಗಳ ಬಗ್ಗೆ ಇಲ್ಲಿ ವಿವರಗಳಿವೆ.

**ಪರಿಚ್ಛೇದ 1 : 18 ವರ್ಷದೊಳಗಿನ ಎಲ್ಲರೂ ಮಕ್ಕಳು.** **(ನೋಡಿ ಪುಟ 16)**

**ಪರಿಚ್ಛೇದ 4 : ಮಕ್ಕಳ ಹಕ್ಕನ್ನು ಒಪ್ಪಿದ ಸರಕಾರಗಳು ಇವುಗಳನ್ನು ಮಾನ್ಯಮಾಡಲು ಆಯಾ ದೇಶದಲ್ಲಿ ಸೂಕ್ತವಾದ ಶಾಸನಾತ್ಮಕ ಹಾಗೂ ಆಡಳಿತಾತ್ಮಕ ಕ್ರಮಗಳು, ಮಾರ್ಪಾಡುಗಳನ್ನು ಮಾಡಬೇಕು. ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಹಕ್ಕುಗಳ ಜಾರಿಗಾಗಿ ಗರಿಷ್ಠ ಪ್ರಮಾಣದ ಸಂಪನ್ಮೂಲಗಳ ಬಳಕೆ ಆಗಬೇಕು. ಬೇಕಾಗಿದ್ದಲ್ಲಿ ಅಂತಾರಾಷ್ಟ್ರೀಯ ಸಹಕಾರವನ್ನು ಪಡೆಯಬೇಕು.**

**ಪರಿಚ್ಛೇದ 18 : ಮಕ್ಕಳ ಜವಾಬ್ದಾರಿ ತಂದೆತಾಯಿಯರದ್ದು.(ಇದೇ ಲೇಖನದಲ್ಲಿದೆ.)**

**ಪರಿಚ್ಛೇದ 41 : ಮಕ್ಕಳಿಗೆ ಅವರ ಹಕ್ಕುಗಳನ್ನು ಜಾರಿಗೊಳಿಸಲು ದೊರಕಿಸಿಕೊಡಲು ಯಾವುದೇ ಕಾನೂನು, ನಿಯಮಗಳಿಗೆ ಒಡಂಬಡಿಕೆಯಲ್ಲಿನ ಯಾವುದೇ ಷರತ್ತುಗಳು ಅಡ್ಡಿ ಆಗಬಾರದು. (ಎ) ದೇಶಗಳ ಕಾನೂನು ಅಥವಾ (ಬಿ) ಅಂತಾರಾಷ್ಟ್ರೀಯ ಕಾನೂನುಗಳಾಗಲಿ ಇವುಗಳಿಗೆ ಅಡ್ಡಿಯಾಗಬಾರದು.**



# ಬಾಳು ಬೆಳಗಬೇಕು



ಬದುಕಿದರೆ ತಾನೆ ಬಾಳುವುದು. ಬಾಳಲು ಬೇಕು ಆರೋಗ್ಯ. ಬೆಳೆಯುವ ಮಗುವಿಗೆ ಬೇಕು ರಕ್ಷಣೆ. ಇರಬಾರದು ಮೇಲು ಕೀಳು, ಗಂಡು-ಹೆಣ್ಣೆಂಬ ತಾರತಮ್ಯ. ಬಲವಿಲ್ಲದವರ ಶೋಷಣೆ ಸಲ್ಲದು. ಕಷ್ಟದಲ್ಲಿರುವ ಮಕ್ಕಳಿಗೆ ಸಹಾಯ ಹಸ್ತ ಚಾಚಬೇಕು. ಈ ಎಲ್ಲ ವಿಚಾರಗಳ ನಂತರ 'ಬದುಕಿದರೆ ಸಾಕೆ ?' ಎಂಬ ಪ್ರಶ್ನೆ ಏಳುತ್ತದೆ. ಅರ್ಥಪೂರ್ಣ ಜೀವನ ನಡೆಸಲು ಮನೋವಿಕಾಸ ಬೇಕು. ಬುದ್ಧಿ ವಿಕಾಸವಾಗಲು ಅವಕಾಶ ಬೇಕು. ಬಾಳು ಬೆಳಗಬೇಕು. ಅರಿವಿನ ದೀಪದಿಂದ ಈ ಬೆಳಗು ಕಾಣಲು ಸಾಧ್ಯ.

ಮಕ್ಕಳ ಹಕ್ಕುಗಳಲ್ಲಿ ಪ್ರಮುಖವಾದ ಮೂರನೆಯ ಭಾಗ ಎಲ್ಲ ಮಕ್ಕಳ ವಿಕಾಸ ಆಗಬೇಕೆಂಬ ಆಶಯ. ಮಕ್ಕಳ ಹಕ್ಕುಗಳ ಒಡಂಬಡಿಕೆಯ 15 ಪರಿಚ್ಛೇದಗಳು ಮಕ್ಕಳ ವಿಕಾಸ ಎಂದರೆ ಏನು, ಅದು ಹೇಗಿರಬೇಕು ಎಂದು ವಿವರಿಸುತ್ತದೆ. ಆಟಪಾಟ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸುವಿಕೆ, ಮನೋರಂಜನೆ, ಶಿಕ್ಷಣ, ದೈಹಿಕ, ಸಾಮಾಜಿಕ, ಮಾನಸಿಕ ಹಾಗೂ ಆಧ್ಯಾತ್ಮಿಕ ಬೆಳವಣಿಗೆಗಳ ಬಗ್ಗೆ ಇಲ್ಲಿ ಗಮನಿಸಲಾಗಿದೆ. ಮಕ್ಕಳಿಗೆ ಸಿಗಬೇಕಾದ ಮಾಹಿತಿ, ಅವರು ಯಾವ ಯಾವ ರೀತಿಯ ವಿಚಾರಗಳನ್ನು ತಿಳಿದರೆ ಒಳಿತು ಎಂಬುದೂ ಸಹ ಇಲ್ಲಿ ಅಡಕವಾಗಿದೆ.

## ಮಕ್ಕಳ ವಿಕಾಸ ಅಥವಾ ಅಭಿವೃದ್ಧಿ ಎಂದರೆ ಏನು ?

**'ಹತ್ತು ವರ್ಷಗಳಿಗಾಗಿ ಮರ ಬೆಳೆಸು, ಒಂದು ತಲೆಮಾರಿಗಾಗಿ ಜನರಲ್ಲಿ ಶಿಕ್ಷಣ, ಅರಿವು ಮೂಡಿಸು' - ವಿಯಟ್ನಾಂನ್ ಒಂದು ಗಾದೆ.** 'ವಿಕಾಸ'ದ ಹಿಂದಿರುವ ಮೂಲಮಂತ್ರ ಇದೇ. ಪ್ರತಿದೇಶವೂ ತನ್ನ ಮುಂದಿನ ನೂರಾರು ವರ್ಷಗಳ ತಲೆಮಾರುಗಳನ್ನು ಕಾಯುವ ಕೆಲಸವನ್ನು ಈಗಲೇ ಆರಂಭಿಸಬೇಕಿದೆ. ಆದ್ದರಿಂದ 'ಇಂದಿನ ಮಕ್ಕಳ ವಿಕಾಸ ಮುಂದಿನ ಭವಿಷ್ಯ' ಎಂದು ಪ್ರತಿಪಾದಿಸಲಾಗಿದೆ.

- **....ಜಗತ್ತಿನಾದ್ಯಂತ 100 ಮಿಲಿಯನ್‌ಗಳಿಗೂ ಹೆಚ್ಚು ಮಕ್ಕಳು ಮೂಲ ಶಾಲಾಶಿಕ್ಷಣದಿಂದ ವಂಚಿತರಾಗಿದ್ದಾರೆ. ಇದರಲ್ಲಿ 3ನೇ ಎರಡು ಭಾಗ ಹೆಣ್ಣು ಮಕ್ಕಳು. ಎಲ್ಲರಿಗೂ ಸೂಕ್ತವಾದ ಮೂಲ ಶಿಕ್ಷಣ ಒದಗಿಸಿ, ಅನಕ್ಷರತೆಯನ್ನು ಹೊಡೆದೋಡಿಸಿದರೆ ಅದು ಜಗತ್ತಿನ ಮಕ್ಕಳ ಅಭಿವೃದ್ಧಿಗೆ ನಾವು ಕೊಡುವ ದೊಡ್ಡ ಕೊಡುಗೆ.**
- **..... ಜಗತ್ತಿನ ಮಕ್ಕಳ ಬೆಳವಣಿಗೆ, ಅಭಿವೃದ್ಧಿಗಾಗಿ ಹಸಿವು, ಅಪೌಷ್ಟಿಕತೆ ಮತ್ತು ಕ್ಷಾಮಡಾಮರಗಳನ್ನು ಅಳಿಸಲು ನಾವು ಯತ್ನಿಸುವೆವು. ಮಕ್ಕಳಿಗಾಗಿ ಜಾಗತಿಕ ಶೃಂಗಸಭೆಯ ಘೋಷಣೆ 30 ಸೆಪ್ಟೆಂಬರ್ 1990, ನ್ಯೂಯಾರ್ಕ್.**

ಜಾಗತಿಕ ಸಮ್ಮೇಳನದ ಬೆನ್ನಲ್ಲೇ ನಡೆದ ಜಾಗತಿಕ ಮಟ್ಟದ ಕ್ರಿಯಾಯೋಜನೆ ಹೀಗೆ ಹೇಳುತ್ತದೆ -

## ಮೂಲ ಶಿಕ್ಷಣ ಮತ್ತು ಸಾಕ್ಷರತೆ : (ಜೋನ್‌ತಿಯೆಮ್, ಥಾಯ್‌ಲ್ಯಾಂಡ್)

ಕಾಲಂ. 20 ಶಿಕ್ಷಣ ಕುರಿತಾದ ಜಾಗತಿಕ ಸಮ್ಮೇಳನದಲ್ಲಿ ಭಾಗವಹಿಸಿದ್ದ ಎಲ್ಲ ಸರಕಾರಗಳು ಈ ಮುಂದಿನವುಗಳಿಗೆ ಒಪ್ಪಿಕೊಂಡಿದೆ.

100 ಮಿಲಿಯನ್ ಮಕ್ಕಳು ಹಾಗೂ ಒಂದು ಮಿಲಿಯನ್ ವಯಸ್ಕರಿಗೆ (ಇವರಿಬ್ಬರಲ್ಲೂ ಮೂರನೇ ಎರಡು ಭಾಗ ಹೆಣ್ಣುಮಕ್ಕಳು) ತುರ್ತಾಗಿ ಶಿಕ್ಷಣ ಹಾಗೂ ಸಾಕ್ಷರತೆಗೆ ಅವಕಾಶ ಮಾಡಿಕೊಡಲಾಗುವುದು. ಇದಕ್ಕಾಗಿ ಮಾಡಬೇಕಾದುದೇನೆಂದರೆ :-

(ಎ) ಪ್ರಾಥಮಿಕ ಪೂರ್ವ ಹಾಗೂ ಪುಟ್ಟಮಕ್ಕಳಿಗಾಗಿ ವಿಕಾಸ ಕಾರ್ಯಕ್ರಮಗಳನ್ನು ಎಲ್ಲ ಮಕ್ಕಳಿಗೂ ದೊರಕುವಂತೆ ವಿಸ್ತರಿಸುವುದು.

(ಬಿ) ಎಲ್ಲರಿಗೂ ಮೂಲ ಶಿಕ್ಷಣ ದೊರಕುವಂತೆ ಸಾರ್ವತ್ರಿಕ ಪ್ರಯತ್ನಗಳು, ಪ್ರಾಥಮಿಕ ಶಿಕ್ಷಣ ಅಥವಾ ಅದಕ್ಕೆ ಸಮನಾದ ಶಿಕ್ಷಣ ಮಟ್ಟವನ್ನು ಶಾಲಾ ಶಿಕ್ಷಣ ಹೊಂದಬೇಕಾದ ವಯಸ್ಸಿನ ಕನಿಷ್ಠ ಶೇ. 80 ಮಕ್ಕಳಿಗೆ ದೊರಕಿಸಿ ಗಂಡು ಹೆಣ್ಣುಗಳ ನಡುವಿನ ಶಿಕ್ಷಣ ಮಟ್ಟದ ಕಂದಕವನ್ನು ಮುಚ್ಚುವುದು.

(ಸಿ) ಹೆಂಗಸರು ಮತ್ತು ವಯಸ್ಕರ ಶಿಕ್ಷಣಕ್ಕೆ ಒತ್ತು ನೀಡಿ ಈಗಿರುವ ಅನಕ್ಷರಸ್ಥರ ಪ್ರಮಾಣವನ್ನು ಅರ್ಧಕ್ಕೆ ಇಳಿಸುವುದು.

(ಡಿ) ವೃತ್ತಿ ಶಿಕ್ಷಣ ಮತ್ತು ವೃತ್ತಿ ಪಡೆಯಲು ತಯ್ಯಾರಿ.

(ಇ) ಮಕ್ಕಳು ಮತ್ತವರ ಕುಟುಂಬಗಳ ಗುಣಮಟ್ಟವನ್ನು ಹೆಚ್ಚಿಸುವ ಮಾಹಿತಿಯನ್ನು ಸಾಂಪ್ರದಾಯಿಕ ಹಾಗೂ ಆಧುನಿಕ ಮಾಧ್ಯಮಗಳ ಮೂಲಕ ತಲುಪಿಸುವುದು.

21. ಮಾನವ ಅಭಿವೃದ್ಧಿ ಹಾಗೂ ಜೀವನ ಗುಣಮಟ್ಟದ ಸುಧಾರಣೆಗಾಗಿ ತಾಯಿ -ಮಕ್ಕಳ ಆರೋಗ್ಯ, ಪರಿಸರದ ರಕ್ಷಣೆ ಹಾಗೂ ನಿರಂತರ ಬೆಳವಣಿಗೆಗಾಗಿ ಶಿಕ್ಷಣ ಹಾಗೂ ಸಾಕ್ಷರತೆಗೆ ಒತ್ತು ನೀಡುವುದು ಅತ್ಯವಶ್ಯಕ. ಹೀಗಾಗಿ ಶೈಕ್ಷಣಿಕ ವಿಚಾರಗಳಿಗೆ, ಕಾರ್ಯಕ್ರಮ, ಯೋಜನೆಗಳಿಗೆ ಎಲ್ಲ ಸರಕಾರಗಳು ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಟ್ಟು ಕ್ರಿಯಾಯೋಜನೆಗಳನ್ನು ತಯಾರಿಸಬೇಕು. ಇದಕ್ಕಾಗಿ ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಸಹಕಾರಗಳನ್ನು ಪಡೆಯಬೇಕು.

- ಒಂದೆರಡು ಲೇಖನಗಳಲ್ಲಿ (ಲೇಖನ 5-6) 'ದುಃಸ್ಥಿತಿಯಲ್ಲಿರುವ ಮಕ್ಕಳು ಯಾರು ಯಾರು ಪಟ್ಟಿಮಾಡಿ' ಎಂದು ಹೇಳಲಾಗಿತ್ತು. ಅದೇ ರೀತಿ ಈಗಲೂ 'ಯಾವ ಮಕ್ಕಳ ವಿಕಾಸ ?' ಎಂಬ ಪ್ರಶ್ನೆ ನಮ್ಮ ಎದುರಿನಲ್ಲಿದೆ. ಮುಂದೆ ಓದುವ ಮುನ್ನ ವಿವಿಧ ವರ್ಗ, ಜಾತಿ, ಭೌಗೋಳಿಕ ಪ್ರದೇಶ, ಹಾಗೂ ವಿಭಿನ್ನ ಪರಿಸ್ಥಿತಿಯಲ್ಲಿರುವ ಮಕ್ಕಳನ್ನು ಕಲ್ಪಿಸಿಕೊಂಡು ಅವರ ದೃಷ್ಟಿಯಲ್ಲಿ ಅಭಿವೃದ್ಧಿ ಎಂದರೆ ಏನು ಎಂದು ಚರ್ಚೆ ಮಾಡಿ.

| ಪರಿಸ್ಥಿತಿ | ಗುಡ್ಡಗಾಡು ಪ್ರದೇಶ | ಗ್ರಾಮೀಣ | ಕೊಳೆಗೇರಿ | ಬೀದಿ | ದುಡಿವ ಮಗು | ಅಲೆಮಾರಿ | ನಗರ |
|---|---|---|---|---|---|---|---|
| ಬಡ ಕುಟುಂಬದ ಮಗು | | | | | | | |
| ನಿರ್ವಸಿತ ಕುಟುಂಬದ ಮಗು | | | | | | | |
| ಹೆಣ್ಣು ಮಗು | | | | | | | |
| ಅಂಗವಿಕಲ ಮಗು | | | | | | | |
| ಶ್ರೀಮಂತ ಕುಟುಂಬದ ಮಗು | | | | | | | |
| ನಿರುದ್ಯೋಗಿ ಕುಟುಂಬದ ಮಗು | | | | | | | |
| ಇತ್ಯಾದಿ | | | | | | | |

- ನಿಮಗೆ ಈ ಪಟ್ಟಿ ಹೆಚ್ಚಿನದೇನನ್ನೂ ಹೇಳುವುದಿಲ್ಲ. ವಿವಿಧ ಪರಿಸ್ಥಿತಿ ಹಾಗೂ ಮಗುವಿನ ಪರಿಸರವನ್ನು ಕಲ್ಪಿಸಿಕೊಂಡು ಅಲ್ಲಿನ ಮಕ್ಕಳ ವಿಕಾಸ ಅಥವಾ ಅಭಿವೃದ್ಧಿಗೆ ಏನು ಮಾಡಿದರೆ ಒಳಿತು ಎಂದು ಚರ್ಚೆ ಮಾಡಲು, ಕಂಡುಕೊಳ್ಳಲು ಇದೊಂದು ವಿಧಾನ.

ಕೊಳೆಗೇರಿಯಲ್ಲಿರುವ ಮಗುವಿನ ಶೈಕ್ಷಣಿಕ ಬೇಡಿಕೆ, ಮನೋರಂಜನೆ, ಅವಕಾಶಗಳ ಬಗ್ಗೆ ಕಲ್ಪನೆಗಳು ಮತ್ತು ಒಂದು ಶ್ರೀಮಂತ ಕುಟುಂಬದ ಮಗುವಿನ ಇದೇ ವಿಚಾರಗಳ ಕಲ್ಪನೆಗಳು ಬೇರೆಯೇ ಆಗಿರುತ್ತವೆ. ಹಾಗೆಯೇ ಯಾವುದೋ ಕುಗ್ರಾಮದಲ್ಲಿ ನಿರ್ವಸಿತರಾಗುವ ಭಯದಲ್ಲಿರುವ ಮೂಲನಿವಾಸಿಗಳ ಕುಟುಂಬದ ಮಗುವಿನ ಬೇಡಿಕೆ ಬೇರೆ ಕುಟುಂಬಗಳ ಮಕ್ಕಳ ಕನಸುಗಳಿಗಿಂತ ಭಿನ್ನವಾಗಿರುತ್ತವೆ. ಬಾಲಾಪರಾಧದ ಆಪಾದನೆ ಹೊತ್ತಿರುವ ಮಗುವಿಗೂ ಶಿಕ್ಷಣ, ಮೌಲ್ಯಗಳ ಬಗ್ಗೆ ಸೂಕ್ತ ಮಾರ್ಗದರ್ಶನ ಪಡೆದ ಮಗುವಿನ ಆಶೆ ಆಶೋತ್ತರಗಳಿಗೂ ವ್ಯತ್ಯಾಸವಿರುತ್ತದೆ. ಬದುಕಲು ದುಡಿಯಲೇಬೇಕಿರುವ ಮಗು ಹಾಗೂ ಹೆಣ್ಣುಮಗು, ಸರ್ವಸೌಲಭ್ಯಗಳನ್ನು ಹೊಂದಿರುವ ಮಗುವಿಗೂ ವ್ಯತ್ಯಾಸವಿದೆ. ಅಂತೆಯೇ ನಿರಾಶ್ರಿತ ಮಗು, ಯುದ್ಧದ ನೆರಳಿನಲ್ಲಿರುವ ಮಗು, ಅಲೆಮಾರಿಗಳ ಮಕ್ಕಳು - ಹೀಗೆ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ.

ಮಕ್ಕಳ ಹಕ್ಕುಗಳ ಒಡಂಬಡಿಕೆಯಲ್ಲಿ ಎಲ್ಲ ತರಹದ ಮಕ್ಕಳು ಬದುಕನ್ನು ತಟ್ಟಬೇಕು, ಎಲ್ಲರ ಬದುಕು ಹಸನುಗೊಳಿಸಿ - ಬದುಕು, ರಕ್ಷಣೆ, ವಿಕಾಸ - ಬಾಳು ಬೆಳಗಿಸಬೇಕೆಂಬ ಕನಸಿದೆ. ಇದು ಸಾಧ್ಯವೇ ? ಉತ್ತರಿಸಲು ಪ್ರಯತ್ನಿಸಿ.



5

## ಪೋಷಕರ ಜವಾಬ್ದಾರಿ

ಎಲ್ಲ ಮಕ್ಕಳು ಅವರವರ ತಾಯಿ-ತಂದೆ, ಅವರ ಬಂಧು-ಬಳಗ, ಸಮುದಾಯ, ಅವರ ಸಂಸ್ಕೃತಿ, ಸಂಪ್ರದಾಯಗಳ ನೆರೆಯಲ್ಲೇ ಬೆಳೆದರೆ ಒಳಿತು. ಆ ಸಮುದಾಯ, ಬಂಧುಬಳಗ, ಕುಟುಂಬ ಮಿಗಿಲಾಗಿ ತಂದೆ-ತಾಯಿಯರಿಗೆ ತಮ್ಮ ತಮ್ಮ ಮಕ್ಕಳನ್ನು ಪೋಷಿಸುವ, ಸಲಹೆ ಸೂಚನೆ, ಮಾರ್ಗದರ್ಶನ ನೀಡುವ ಹಕ್ಕು, ಜವಾಬ್ದಾರಿ ಇದೆ.



ಕಾನೂನು

- **ಹಿಂದೂ ಅಪ್ರಾಪ್ತ ವಯಸ್ಕರ ಪೋಷಕ ಕಾನೂನು** (Hindu Minority & Guardianship Act-1956) ಪೋಷಕರಿಗೆ ಅವರ ಮಕ್ಕಳ ಯೋಗಕ್ಷೇಮ ನೋಡಿಕೊಳ್ಳುವ ಜವಾಬ್ದಾರಿಯಿದೆ ಎಂದಿದೆ.
- **ಮಕ್ಕಳಿಗೆ ನ್ಯಾಯ ಕಾನೂನು** (JJ Act-1986)ಯಾರಾದರೂ ಮಗುವನ್ನು ಪೋಲೀಸರು ತಮ್ಮ ವಶಕ್ಕೆ ತೆಗೆದುಕೊಂಡಾಗ ಆದಷ್ಟು ಬೇಗನೆ ಅವರ ತಂದೆ ತಾಯಿ/ಪೋಷಕರಿಗೆ ತಿಳಿಸಬೇಕೆಂದು ನಿರ್ದೇಶಿಸುವುದು.

ಪರಿಚ್ಛೇದ 6, 7, 9 ರ ಬಗ್ಗೆ ಪುಟ 17, 19 ಹಾಗೂ 20 ನೋಡಿ. ಪರಿಚ್ಛೇದ 10, 11 ರ ಬಗ್ಗೆ ಪುಟ 38 ನೋಡಿ.



12 ಪರಿಚ್ಛೇದ

## ಅಭಿಪ್ರಾಯ ವ್ಯಕ್ತಪಡಿಸುವ ಹಕ್ಕು

**ತಮ್ಮ ಅಭಿಪ್ರಾಯಗಳನ್ನು ರೂಪಿಸಿಕೊಳ್ಳಲು ಸಮರ್ಥರಾದ ಮಕ್ಕಳಿಗೆ, ತಮ್ಮನ್ನು ಕುರಿತ ವಿಚಾರಗಳನ್ನು ಯಾವುದೇ ಅಡ್ಡಿ ಆತಂಕಗಳು ಇಲ್ಲದಂತಹ ವಾತಾವರಣದಲ್ಲಿ ಮಂಡಿಸಲು ಅವಕಾಶ ನೀಡಬೇಕು. ಮಕ್ಕಳ ಮನಸ್ಸು, ವಯಸ್ಸು, ಪ್ರಬುದ್ಧತೆಯನ್ನು ಗಮನಿಸಿ ಅವರ ಅಭಿಪ್ರಾಯಗಳಿಗೆ ಸೂಕ್ತ ಪ್ರಾಮುಖ್ಯತೆ ನೀಡಬೇಕು.**

**ಈ ನಿಟ್ಟಿನಲ್ಲಿ ಮಕ್ಕಳನ್ನು ಕುರಿತು ನ್ಯಾಯಿಕ ಹಾಗೂ ಆಡಳಿತಾತ್ಮಕ ಕಾರ್ಯವಿಧಾನಗಳ ಮೂಲಕ, ನೇರವಾಗಿ ಅಥವಾ ತಮ್ಮ ಪ್ರತಿನಿಧಿಗಳ ಮೂಲಕ ಅಥವಾ ಸೂಕ್ತ ಮಂಡಳಿಗಳ ಮೂಲಕ, ರಾಷ್ಟ್ರೀಯ ಕಾನೂನುಗಳ ವಿಧಾನಗಳಲ್ಲಿ ನೀಡಿರುವ ಅವಕಾಶಗಳಂತೆ ತಮ್ಮ ಅಭಿಪ್ರಾಯ ವ್ಯಕ್ತಪಡಿಸಲು ಮಕ್ಕಳಿಗೆ ಅವಕಾಶ ನೀಡಬೇಕು.**

ಮಕ್ಕಳ ಅಭಿಪ್ರಾಯಗಳಿಗೆ ಅವಕಾಶ ಎನ್ನುವುದು ಹೊಸ ವಿಚಾರವೇನಲ್ಲ, ಆದರೆ ಅವರ ಅಭಿಪ್ರಾಯಗಳನ್ನು ನಾವು ಹೇಗೆ ಅರ್ಥಮಾಡಿಕೊಳ್ಳುತ್ತೇವೆ, ಅವುಗಳಿಗೆ ಎಂತಹ ಬೆಲೆ ಕೊಡುತ್ತೇವೆ ? ಎಂಬುದು ಮುಖ್ಯ. ಮಕ್ಕಳ ಅಭಿಪ್ರಾಯವೆಂದರೆ, ಯಾವ ಚಾಕೊಲೇಟ್ ಬೇಕು, ಯಾವ ಬಣ್ಣದ ಬಟ್ಟೆ ಕೊಳ್ಳಬೇಕು ಅಥವಾ ಯಾವ ಆಟ ಆಡಬೇಕು ಎಂಬುದಷ್ಟೇ ಅಲ್ಲ, ಮುಂದೆ ಹೋಗಿ ವಿವಿಧ ವಿಚಾರಗಳ ಬಗ್ಗೆಯೂ ಆಲಿಸಬೇಕಾಗುತ್ತದೆ. ಮಕ್ಕಳ ಶಿಕ್ಷಣ, ಆರೋಗ್ಯ, ಆಟಪಾಟ, ವಿಚಾರ ವಿಮರ್ಶೆ ಎಲ್ಲದಕ್ಕೂ ಮಕ್ಕಳ ನಿರ್ಧಾರ ಮುಖ್ಯವಾಗಿದೆ. ಮಕ್ಕಳು ಅಭಿಪ್ರಾಯಗಳನ್ನು ನೀಡುವುದು, ತಮ್ಮ ಅಭಿವೃದ್ಧಿಗಾಗಿ ಏನು ಸೂಕ್ತ ಎನಿಸುವುದೋ ಅದನ್ನು ಹೇಳುವುದು, ಪಡೆಯುವುದು ಅಗತ್ಯ.



ಕಾನೂನು

- **ಹಿಂದೂ ವಿವಾಹ ಕಾನೂನು** (Hindu Marraige Act-1955)ವಿಚ್ಛೇದನದ ಪ್ರಕರಣ ನ್ಯಾಯಾಲಯದ ಮುಂದೆ ಇದ್ದು ಅಂತಹವರ ಮಗು ಯಾರಿಗೆ ಸೇರಬೇಕು ಎಂಬ ಪ್ರಶ್ನೆ ಇದ್ದಲ್ಲಿ ಆ ಬಗ್ಗೆ ಮಗುವಿನ ಅಭಿಪ್ರಾಯವನ್ನು ಕೇಳಬೇಕು.

  ಈ ಕಾನೂನಿಗೆ 1981ರಲ್ಲಿ ಆದ ತಿದ್ದುಪಡಿ (ಸೆಕ್ಷನ್ 13 ಇ ಮತ್ತು 28 ಸಿ) ಮಗುವಿನ ಪಾಲನೆ-ಪೋಷಣೆಗೆ ತಂದೆ ಅಥವಾ ತಾಯಿ ವ್ಯವಸ್ಥೆ ಮಾಡದಿದ್ದಲ್ಲಿ ವಿಚ್ಛೇದನದ ತೀರ್ಪನ್ನು ತಡೆಹಿಡಿಯಲು ನಿರ್ದೇಶಿಸುವುದು.
- **ಪೋಷಕರು ಮತ್ತು ಮಕ್ಕಳ ಕಾನೂನು** (Guardian and Wards Act-1890) ವಿಚ್ಛೇದನದ ಪ್ರಕರಣದಲ್ಲಿ ಅಥವಾ ಪೋಷಕರ ಅನುಪಸ್ಥಿತಿಯಲ್ಲಿ ಮಗು ಅಭಿಪ್ರಾಯ ವ್ಯಕ್ತಪಡಿಸುವಷ್ಟು ದೊಡ್ಡದಾಗಿದ್ದಲ್ಲಿ, ಆ ಮಗುವಿನ ಆಯ್ಕೆಯಂತೆ ಮಗುವಿನ ಪಾಲನೆಗೆ ಮತ್ತು ಆಸ್ತಿ (ಇದ್ದಲ್ಲಿ) ಉಸ್ತುವಾರಿಗೆ ಪೋಷಕರನ್ನು ನೇಮಿಸಲಾಗುವುದು.
- **ಹಿಂದೂ ದತ್ತು ಮತ್ತು ನಿರ್ವಹಣಾ ಕಾನೂನು** (Hindu Adoption and Maintainence Act-1956) ದತ್ತು ಪಡೆಯಲು ಪಾಲಕರಿಗೆ ಅನುಮತಿ ನೀಡುವ ಮೊದಲು ನ್ಯಾಯಾಲಯ ಮಗುವಿನ ಅಭಿಪ್ರಾಯವನ್ನು ಕೇಳಬೇಕು. (9.5)
- **ಮಕ್ಕಳಿಗೆ ನ್ಯಾಯ ಕಾನೂನು** (JJ Act-1986)ಮಕ್ಕಳ ನ್ಯಾಯ ಮಂಡಳಿಯು ತಪ್ಪು ಮಾಡಿದ ಮಗುವಿನ ವಿಚಾರಣೆ ಮಾಡುವಾಗ ಹಾಗೂ ಮಗುವಿನ ಹೇಳಿಕೆಗಳನ್ನು ದಾಖಲೆ ಮಾಡುವಾಗ ಭಾರತೀಯ ದಂಡ ಸಂಹಿತೆಯ ನಿಯಮಗಳನ್ನು ಪಾಲಿಸಬೇಕೆಂದೇನೂ ನಿಯಮವಿಲ್ಲ.



ಚರ್ಚೆ

## 6.1

- ನಿಮ್ಮ ಮನೆಯಲ್ಲಿ ನಿಮ್ಮ ಮಕ್ಕಳು ಅವರಿಗೆ ಸಂಬಂಧಿಸಿದ ವಿಚಾರಗಳ ಬಗ್ಗೆ ಅಭಿಪ್ರಾಯ ವ್ಯಕ್ತಪಡಿಸಲು ಅವಕಾಶ ನೀಡುವಿರಾ ? ಮಕ್ಕಳು ತಮ್ಮ ಇಷ್ಟಾನಿಷ್ಟಗಳ ಬಗ್ಗೆ ಮುಕ್ತವಾಗಿ ಮಾತನಾಡಿದಾಗ ನಿಮಗೆ ಏನನ್ನಿಸುತ್ತದೆ ? ನಮ್ಮ ವ್ಯವಸ್ಥೆಯಲ್ಲಿ ಮಕ್ಕಳಿಗೆ ಅಭಿಪ್ರಾಯ ವ್ಯಕ್ತಪಡಿಸಲು ಪ್ರಚೋದಿಸುವ, ಪ್ರೋತ್ಸಾಹಿಸುವ ರೀತಿನೀತಿ ಇದೆಯೇ? ಇದು ವಾಸ್ತವ ಎಂದು ನಿಮಗನ್ನಿಸುವುದೆ ?
- ನಿಮ್ಮ ಊರಿನಲ್ಲಿ ಮಕ್ಕಳ ಸಂಘಗಳಿವೆಯೇ ? ಇದ್ದರೆ ಅವರ ಧ್ಯೇಯೋದ್ದೇಶಗಳೇನು ತಿಳಿಯಿರಿ. ಆ ಸಂಘದ ನಿರ್ಮಾಣದಲ್ಲಿ ಮುಖ್ಯ ಪಾತ್ರ ವಹಿಸಿದವರಾರು ? ದೊಡ್ಡವರೋ ಚಿಕ್ಕವರೋ ? ಯಾರಿಗೆ ಎಷ್ಟು ಅಧಿಕಾರವಿದೆ? ಮಕ್ಕಳಿಗೆ ತಮ್ಮ ಸಂಘದ ಬಗ್ಗೆ ಏನು ತಿಳಿದಿದೆ ? ಅದರ ಚಟುವಟಿಕೆಗಳಲ್ಲಿ ಮಕ್ಕಳ ಭಾಗವಹಿಸುವಿಕೆ ಹೇಗಿದೆ? ತಿಳಿಯಿರಿ.
- ಮಕ್ಕಳ ಸಂಘಗಳು ಎಂದರೆ ದುಡಿಯುವ ಮಕ್ಕಳ ಸಂಘಗಳೇ ಆಗಬೇಕಿಲ್ಲ. ಮಕ್ಕಳ ಶಾಲಾ ಸಂಘಗಳು, ಸಾಂಸ್ಕೃತಿಕ ಸಂಘಗಳು ಇತ್ಯಾದಿಯೂ ಆಗಬಹುದು. ಮಕ್ಕಳ ಸಂಘಗಳ ಬಗ್ಗೆ ಹೆಚ್ಚು ತಿಳಿಯಲು ಸಂಪರ್ಕಿಸಿ : **ಭೀಮ ಸಂಘ, ಸಿ.ಡಬ್ಲ್ಯುಸಿ., ಬೆಂಗಳೂರು ; ಎಳೆ ನಕ್ಷತ್ರಗಳು, ಏಕಲವ್ಯ, ಚಿತ್ರದುರ್ಗ, ಮಕ್ಕಳ ಪಂಚಾಯತ್ ಕುಂದಾಪುರ.**

**ಪರಿಚ್ಛೇದ 13 :** ಮಕ್ಕಳಿಗೆ ವಿವಿಧ ಮಾಧ್ಯಮಗಳ ಮೂಲಕ ಸೂಕ್ತ ಮಾಹಿತಿಯನ್ನು ಪಡೆಯುವ ಮತ್ತು ಹಾಗೆ ಪಡೆದ ಮಾಹಿತಿಯನ್ನು ವಿಶ್ಲೇಷಿಸುವ ಹಾಗೂ ಇತರರಿಗೂ ಮಾಹಿತಿ ನೀಡುವ ಸ್ವಾತಂತ್ರ್ಯ ಇದೆ.

**ಪರಿಚ್ಛೇದ 14 :** ತಮ್ಮ ನಂಬಿಕೆಯಂತೆ ಅಥವಾ ಧರ್ಮದಂತೆ ನಡೆದುಕೊಳ್ಳುವ ಹಕ್ಕು ಮಕ್ಕಳಿಗಿದೆ.

**ಪರಿಚ್ಛೇದ 15 :** ಸಂಘಟಿತರಾಗುವ, ಶಾಂತ ರೀತಿಯಿಂದ ಸಭೆ ಸೇರುವ ಹಕ್ಕು ಮಕ್ಕಳಿಗಿದೆ. ಮಕ್ಕಳು ತಮ್ಮ ವಿಕಾಸಕ್ಕೆ ಸಹ ಚಿಂತಕರೊಡನೆ, ಸಮವಯಸ್ಕರೊಡನೆ ಬೆರೆಯುವ ಅವಶ್ಯಕತೆ ಇದೆ. ಮಕ್ಕಳಿಗೆ ಮಾಹಿತಿ ಪಡೆಯುವ ಹಕ್ಕು ಇದೆ ಎಂದ ಮೇಲೆ ಮಾಹಿತಿ ಕೊಡುವವರಿಗೂ ಒಂದಷ್ಟು ಬಾಧ್ಯತೆಗಳು ಇವೆ ಎಂದು ಅರ್ಥೈಸಬಹುದು. ಈ ದಿಶೆಯಲ್ಲಿ ''ಭೀಮ'' ಪತ್ರಿಕೆಯ ಪ್ರಯತ್ನ ಗಮನಿಸಬಹುದು. ''ಭೀಮ''; CWC (The Concerned for Working Children) ಬೆಂಗಳೂರು, ಇವರ ಪ್ರಕಟಣೆ.

**ಪರಿಚ್ಛೇದ 17 :** ಮಕ್ಕಳನ್ನು ರಕ್ಷಿಸುವ ಬಗ್ಗೆ ಮಾತನಾಡುವಾಗ ಮಕ್ಕಳಿಗೆ ಹಿಂಸೆ, ತೊಂದರೆ ಆಗಬಾರದೆಂದು ಹೇಳಲಾಗುತ್ತದೆ. ಅದೇ ರೀತಿ ಮಾಧ್ಯಮಗಳು ಹಾನಿಕಾರಕ ವಿಚಾರಗಳು, ಚಿತ್ರ ಪ್ರದರ್ಶನಗಳು ಮಕ್ಕಳಿಗೆ ತೊಂದರೆ ಕೊಡದಂತೆ, ಅವರ ಮಾನಸಿಕ, ದೈಹಿಕ ಅಭಿವೃದ್ಧಿಗೆ ಮಾರಕವಾಗದ ರೀತಿಯಲ್ಲಿರಬೇಕೆಂದು ಸಹ ಆಶಿಸಲಾಗಿದೆ. (ವಿವರಗಳಿಗೆ ಭಾಗ-2 ಅಧ್ಯಾಯ-7 ನೋಡಿ)

## 6.2

- ನಿಮ್ಮ ಸಮುದಾಯದಲ್ಲಿ ಮಕ್ಕಳಿಗೆ ಗ್ರಂಥಾಲಯ ಸೌಲಭ್ಯ ಇದೆಯೇ ? ಅಲ್ಲಿ ಮಕ್ಕಳಿಗೆ ಸೂಕ್ತವಾದ ಓದುವ ಸಾಮಗ್ರಿಗಳು ದೊರಕುತ್ತವೆಯೇ ?
- ಮಕ್ಕಳಿಗೆ ತಮ್ಮ ಭಾವನೆಗಳನ್ನು ವ್ಯಕ್ತಪಡಿಸಲು ಅವಕಾಶ ಸೃಷ್ಟಿಯಾಗಿದೆಯೇ ?
- ನಿಮ್ಮ ಸಮುದಾಯದಲ್ಲಿ ವಿವಿಧ ಧರ್ಮದ ಸಮೂಹಗಳ ಮಕ್ಕಳಿಗೆ ಅವರ ಧರ್ಮಾಚರಣೆಗಳನ್ನು ನಡೆಸಲು ಏನಾದರೂ ಅಡ್ಡಿಯಾದ ಪ್ರಸಂಗಗಳು ಇವೆಯೇ ? ಅವುಗಳನ್ನು ಪರಿಹರಿಸಿಕೊಂಡ ವಿಧಾನಗಳೇನು ?
- ನಿಮ್ಮ ಸಮುದಾಯದಲ್ಲಿ ಮಕ್ಕಳ ಸಂಘಗಳಿವೆಯೇ ? ಈ ಸಂಘಗಳು ಮಕ್ಕಳ ವಿಕಾಸದ ದೃಷ್ಟಿಯಲ್ಲಿ ಏನು ಮಾಡುತ್ತಿವೆ?

ಹಿಂದಿನ ಲೇಖನದಲ್ಲಿ ಮಾಧ್ಯಮಗಳಲ್ಲಿ ಮಕ್ಕಳ ಶೋಷಣೆ ಬಗ್ಗೆ ಹೇಳಲಾಗಿದೆ. ಅದೇ ರೀತಿ ಮಾಧ್ಯಮಗಳು ಪ್ರಜ್ಞಾಪೂರ್ವಕವಾಗಿ ಮಕ್ಕಳ ವಿಕಾಸಕ್ಕಾಗಿ ಏನಾದರೂ ಪ್ರಯತ್ನ ಮಾಡಿದಲ್ಲಿ ಆ ಬಗ್ಗೆ ವಿಮರ್ಶಿಸಿ ಬರೆಯಿರಿ. ಮಾಧ್ಯಮಗಳ ಯಾವ ರೀತಿಯ ಬರಹಗಳು, ವರದಿಗಳು, ಚಿತ್ರ ಪ್ರದರ್ಶನಗಳು ಮಕ್ಕಳ ವಿಕಾಸಕ್ಕೆ ತೊಂದರೆಯೊಡ್ಡಿವೆ ಪಟ್ಟಿ ಮಾಡಿ.

ಈ ಮೇಲಿನ ಎಲ್ಲ ಸಂಗತಿಗಳೂ ಮಕ್ಕಳ ಶ್ರೇಯೋಭಿವೃದ್ಧಿಗಾಗಿ ಮಾಡಬೇಕೆಂದು ಹೇಳಿರುವ ಒಡಂಬಡಿಕೆಯು ಮುಂದೆ ಮಕ್ಕಳು ಸದೃಢರಾಗಿ ಬೆಳೆಯಬೇಕು, ಆರೋಗ್ಯವಂತರಾಗಿರಬೇಕು ಎಂದು ಬಯಸುತ್ತದೆ. (ಪರಿಚ್ಛೇದ 24- ವಿವರಗಳಿಗೆ 'ಆರೋಗ್ಯವೇ ಭಾಗ್ಯ' ನೋಡಿ)



28 ಪರಿಚ್ಛೇದ

## ಶಿಕ್ಷಣದ ಹಕ್ಕು

1. ಮಕ್ಕಳ ವಿಕಾಸವೆಂದರೆ ಅವರಿಗೆ ಶಿಕ್ಷಣ ದೊರಕಬೇಕು ಎಂಬುದನ್ನು ಎಲ್ಲ ರಾಷ್ಟ್ರಗಳು ಗಮನಿಸಬೇಕು. ಇದನ್ನು ಹಂತ-ಹಂತವಾಗಿ ಜಾರಿಗೆ ತರಲು, ಎಲ್ಲರಿಗೂ ಸಮಾನ ಅವಕಾಶಗಳನ್ನು ಸೃಷ್ಟಿಸಲು ಈ ಮುಂದಿನವುಗಳು ತೀರಾ ಅಗತ್ಯ.

ಎ. ಪ್ರಾಥಮಿಕ ಶಿಕ್ಷಣ ಎಲ್ಲರಿಗೂ ಉಚಿತವಾಗಿ ಹಾಗೂ ಕಡ್ಡಾಯವಾಗಿ ದೊರಕುವಂತೆ ಕಾನೂನು, ನಿಯಮದ ಏರ್ಪಾಡುಗಳಾಗಬೇಕು.

ಬಿ. ಸಾಮಾನ್ಯ ಶಿಕ್ಷಣವೇ ಅಲ್ಲದೆ ವೃತ್ತಿಪರವಾದ ಕೌಶಲ್ಯಗಳನ್ನು ಕಲಿಸಬಹುದಾದ ವಿವಿಧ ರೀತಿಯ ಪ್ರೌಢ ಶಿಕ್ಷಣ ಎಲ್ಲ ಮಕ್ಕಳಿಗೂ ದೊರಕುವಂತೆ ಆಗಬೇಕು. ಶಿಕ್ಷಣ ಉಚಿತವಾಗಿರಬೇಕು ಎಂದು ಹೇಳಿದರಷ್ಟೇ ಸಾಲದು, ಅವಶ್ಯಕತೆ ಇರುವಲ್ಲಿ ಧನ ಸಹಾಯವನ್ನೂ ಮಾಡಬೇಕು.

ಸಿ. ಸಾಮರ್ಥ್ಯವನ್ನು ಆಧರಿಸಿ ಎಲ್ಲರಿಗೂ ಸೂಕ್ತವಾದ ಉನ್ನತ ಶಿಕ್ಷಣ ಪಡೆಯಲು ಅವಕಾಶಗಳಿರಬೇಕು.

ಡಿ. ಎಲ್ಲ ಮಕ್ಕಳಿಗೂ ಶಿಕ್ಷಣ, ಔದ್ಯೋಗಿಕ ತರಬೇತಿ ಹಾಗೂ ಈ ಕುರಿತು ಮಾರ್ಗದರ್ಶನ, ಮಾಹಿತಿ ಎಲ್ಲೆಡೆಯೂ ದೊರಕುವಂತಿರಬೇಕು.

ಇ. ಎಲ್ಲ ಮಕ್ಕಳೂ ಶಾಲೆಗೆ ತಪ್ಪದೆ ಹೋಗುವಂತೆ ಹಾಗೂ ಮಧ್ಯದಲ್ಲೇ ಬಿಡದಂತಹ ಪರಿಸ್ಥಿತಿಗಳನ್ನು ನಿರ್ಮಿಸಿ ನಿಯಂತ್ರಿಸಬೇಕು.

2. ಶಾಲೆಗಳಲ್ಲಿ ಶಿಸ್ತಿನ ನೆಪದಲ್ಲಿ ಮಕ್ಕಳ ಗೌರವಕ್ಕೆ, ರಕ್ಷಣೆಗೆ ಚ್ಯುತಿ ಬಾರದಂತೆ ನೋಡಿಕೊಳ್ಳುವುದು, ಆ ಕುರಿತು ಕ್ರಮ ಕೈಗೊಳ್ಳುವುದು ಸರ್ಕಾರಗಳ ಜವಾಬ್ದಾರಿಯಾಗಿದೆ.

3. ಜಗತ್ತಿನೆಲ್ಲೆಡೆ ಅಜ್ಞಾನದ ಅಂಧಕಾರವನ್ನು ಹೊಡೆದೋಡಿಸಲು, ಎಲ್ಲರನ್ನೂ ಅಕ್ಷರಸ್ಥರನ್ನಾಗಿಸಲು, ಎಲ್ಲೆಡೆಯೂ ವೈಜ್ಞಾನಿಕ ವಿಚಾರದೃಷ್ಟಿ ಬೆಳೆಯುವಂತೆ ಮಾಡಲು, ತಾಂತ್ರಿಕ ಜ್ಞಾನ ಮತ್ತು ನವೀನ ರೀತಿಯ ಶಿಕ್ಷಣ ವಿಧಾನಗಳನ್ನು ಬಳಸುವಂತೆ ಮಾಡಲು, ಅಂತಾರಾಷ್ಟ್ರೀಯ ಮಟ್ಟದಲ್ಲಿ ಕೆಲಸಗಳಾಗ ಬೇಕೆಂದು ಬಯಸಲಾಗಿದೆ. ಅದರಲ್ಲೂ ಅಭಿವೃದ್ಧಿಶೀಲ ದೇಶಗಳತ್ತ ವಿಶೇಷವಾದ ಗಮನವನ್ನು ನೀಡಬೇಕು.



ಕಾನೂನು

- ಭಾರತದ ಸಂವಿಧಾನ ಕಲಂ 45 : ಭಾರತೀಯ ಮಕ್ಕಳಿಗೆಲ್ಲ 14 ವರ್ಷದವರೆಗೆ ಉಚಿತ, ಕಡ್ಡಾಯ ಶಿಕ್ಷಣ ಒದಗಿಸುವುದು ಸರ್ಕಾರದ ಜವಾಬ್ದಾರಿ. (ರಾಜ್ಯನಿರ್ದೇಶಕ ತತ್ವಗಳು)

  ಸೆಕ್ಷನ್ 41- ಸಂವಿಧಾನ ಜಾರಿಯಾದ ಹತ್ತು ವರ್ಷದೊಳಗೆ ದೇಶದ ಆರ್ಥಿಕ ಸಾಮರ್ಥ್ಯ ಮತ್ತು ಅಭಿವೃದ್ಧಿಯ ಮಟ್ಟವನ್ನು ಅನುಸರಿಸಿ, ಉಚಿತ ಶಿಕ್ಷಣವನ್ನು ಎಲ್ಲರಿಗೂ ವ್ಯವಸ್ಥೆ ಮಾಡಬೇಕು.

### ಶಿಕ್ಷಣ ಎಂದರೇನು?

ಇದೊಂದು ತಾತ್ವಿಕ ಪ್ರಶ್ನೆ. ಕೌಶಲ್ಯವನ್ನು ಕಲಿಯುವುದೂ ಸಹ ಶಿಕ್ಷಣ. ಮೀನು ಹಿಡಿಯುವುದು, ರಂಟೆ ಹೊಡೆಯುವುದು, ಕಂಪ್ಯೂಟರ್ ಮೂಲಕ ಚಿತ್ರ ಬರೆಯುವುದನ್ನು ಕಲಿಯುವುದು ಸಹ ಶಿಕ್ಷಣವೇ. ಇಂತಹದೊಂದು ವಾದವಿದ್ದೇ ಇದೆ. ಶಾಲೆಗೆ ಹೋಗುವುದು, ಪದವಿ ಪಡೆಯುವುದೇ ಶಿಕ್ಷಣದ ಉದ್ದೇಶ ಎಂದು ಹೇಳುವವರೂ ಇದ್ದಾರೆ. ಯಾರಿಗೂ ಶಿಕ್ಷಣದ ಅವಕಾಶಗಳು ತಪ್ಪಿ ಹೋಗಬಾರದು ಎಂಬ ಅಂಶ ಪರಿಚ್ಛೇದ 28ರ ಆಶಯವನ್ನು ಗಮನಿಸಿದರೆ ಅರ್ಥವಾಗುತ್ತದೆ. ಅದು ಆದಷ್ಟೂ ಉಚಿತ ವ್ಯವಸ್ಥೆ ಮಾಡಿ, ಎಲ್ಲರಿಗೂ ಉತ್ತಮ ಶಿಕ್ಷಣ, ನಗರ, ಗ್ರಾಮೀಣ, ಗುಡ್ಡಗಾಡು, ಬಡವ, ಶ್ರೀಮಂತ ಹೀಗೆ ಎಲ್ಲ ತರಹದ ಮಕ್ಕಳಿಗೂ ದೊರಕಿಸಬೇಕು.

ಶಿಕ್ಷಣದೊಡನೆ ಮಕ್ಕಳಲ್ಲಿ ವೈಜ್ಞಾನಿಕ ಕೌಶಲ್ಯ, ದೃಷ್ಟಿ ಬೆಳೆಯಬೇಕು ಎಂಬುದೂ ಸಹ ಇಲ್ಲಿನ ಆಶಯ. ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಸಮುದಾಯಗಳ ಸಹಾಯ, ಸಹಕಾರಗಳಿಂದ ಜಗತ್ತಿನ ಎಲ್ಲ ಮಕ್ಕಳಿಗೆ ಉನ್ನತ ಶಿಕ್ಷಣ ಪಡೆಯುವ ಅವಕಾಶ ದೊರಕಬೇಕು ಎಂಬುದು ಸಹ ಇದರಲ್ಲಿ ಧ್ವನಿಸುತ್ತದೆ.



ಚಟುವಟಿಕೆ

## 6.3

- ನಿಮ್ಮ ದೃಷ್ಟಿಯಲ್ಲಿ ಶಿಕ್ಷಣ ಎಂದರೇನು ಚರ್ಚಿಸಿ. ಶಿಕ್ಷಣದಿಂದ ಉಂಟಾಗಿರುವ ಪ್ರಯೋಜನಗಳೇನು - ನಿಮ್ಮ ಭೌಗೋಳಿಕ ಹಾಗೂ ವಿವಿಧ ವರ್ಗ, ಜಾತಿಗಳ ಸಮುದಾಯದ ಹಿನ್ನೆಲೆಯಲ್ಲಿ ಪರೀಕ್ಷಿಸಿ, ಇಂದಿನ ದಶಕಗಳಲ್ಲಿ ಶಿಕ್ಷಣದಿಂದ ವಂಚಿತರಾದವರ ಮೇಲೆ ಎಂತಹ ಪರಿಣಾಮಗಳು ಆಗಿವೆ ತಿಳಿದುಕೊಳ್ಳಿ.

## 6.4

- ನಿಮ್ಮ ಹಳ್ಳಿ/ಸ್ಲಮ್ (ಕೊಳಗೇರಿ)/ಸಮುದಾಯದಲ್ಲಿ ಶಾಲೆಗೆ ಹೋಗುವವರು ಮತ್ತು ಮಧ್ಯದಲ್ಲೇ ಬಿಡುವವರ ಯಾದಿ ಇದ್ದರೆ ಅದನ್ನು ವಿಶ್ಲೇಷಿಸಿ. ಯಾಕೆ ಹೀಗೆ? ಏನು ಮಾಡಬೇಕು? ಇತ್ಯಾದಿ.
- ಇದರೊಡನೆ ಯಾವ ಜಾತಿ ವರ್ಗ ಕೋಮಿನವರು ಮುಂದೆ ಹೋಗುತ್ತಾರೆ ಅಥವಾ ಮಧ್ಯದಲ್ಲೇ ಬಿಡುತ್ತಾರೆ ಗಮನಿಸಿ.
- ಈ ಯಾದಿ ತಯಾರಿಸಲು ಮುಂದಿನ ಪುಟದಲ್ಲಿರುವ ಪಟ್ಟಿಗಳನ್ನು ನೋಡಿ.

## 6.5

- ಮಕ್ಕಳಿಗೆ ಶಿಕ್ಷಣದಲ್ಲಿ ಸಹಾಯಕರಾಗಿರುವ ಅಧ್ಯಾಪಕರುಗಳು ನಿಮ್ಮ ಹಳ್ಳಿಯಲ್ಲೇ ಇದ್ದಾರೇನು ? ಅವರಿಗೆ ಯಾವ ವ್ಯವಸ್ಥೆ, ಯಾವ ಸ್ಥಾನಮಾನ ಇದೆ ? ನಿಮ್ಮ ಸಮುದಾಯದ ಚಟುವಟಿಕೆಗಳಲ್ಲಿ ಅವರ ಪಾತ್ರವೇನು ? ಹೊರಗಡೆಯಿಂದ ಬರುವವರಾದರೆ ವರ್ಷದಲ್ಲಿ ಎಷ್ಟು ದಿನ ಶಾಲೆಗೆ ಬರುತ್ತಾರೆ ? ಮಕ್ಕಳೊಡನೆ ಎಷ್ಟು ಸಮಯ ಕಳೆಯುತ್ತಾರೆ ?

  ಒಮ್ಮೆ ಉತ್ತರ ಕನ್ನಡದ ಭಟ್ಕಳದಲ್ಲಿ ಕೆಲಸ ಮಾಡುವ ಗಣೇಶ ಶೆಟ್ಟಿ ಹೀಗೆ ಹೇಳಿದ್ದರು, 'ಗುಡ್ಡಗಳ ಮೇಲಿರುವ ಶಾಲೆಗಳಿಗೆ ಅಧ್ಯಾಪಕರು ವರುಷದಲ್ಲಿ ನಾಲ್ಕು ಬಾರಿ ಮಾತ್ರ ಬರುತ್ತಾರೆ. ಆಗಸ್ಟ್ 15, ಜನವರಿ 26, ನವೆಂಬರ್ 1 ಮತ್ತು ಆ ಹಳ್ಳಿಯಲ್ಲಿ ಆಚರಿಸುವ ಹಬ್ಬದ ದಿನ'. ಪರಿಸ್ಥಿತಿ ಹೀಗಿದ್ದರೆ ಪರಿಚ್ಛೇದ 28ರ ಆಶಯವೇನಾಗುವುದು?

  ಸುಮಾರು ಐದಾರು ವರ್ಷಗಳಿಂದ ಶಿಕ್ಷಣ ಹಕ್ಕಾಗಬೇಕು, ನಮ್ಮ ಸಂವಿಧಾನಕ್ಕೆ 83ನೇ ತಿದ್ದುಪಡಿ ತಂದು 'ಶಿಕ್ಷಣ ನಮ್ಮ ಹಕ್ಕು' ಆಗಬೇಕು ಎಂಬ ಚರ್ಚೆ ನೆನೆಗುದಿಗೆ ಬಿದ್ದಿದೆ. ಶಿಕ್ಷಣಕ್ಕೂ ಆರ್ಥಿಕಾಭಿವೃದ್ಧಿಗೂ ತಳಕು ಹಾಕಿರುವುದರಿಂದ ಭಾರತ ಸರ್ಕಾರದ ಮೇಲೆ ಶಿಕ್ಷಣ ಹೊಂದಿದ ಸಮುದಾಯವನ್ನು ನಿರ್ಮಿಸಲು ಒತ್ತಡ ಹಾಕಲಾಗಿದೆ.

## 6.6

- ನಿಮ್ಮ ಜಿಲ್ಲೆಯಲ್ಲಿ ಡಿ.ಪಿ.ಇ.ಪಿ. - (ಜಿಲ್ಲಾ ಪ್ರಾಥಮಿಕ ಶಿಕ್ಷಣ) ಯೋಜನೆ ಜಾರಿಯಲ್ಲಿದೆಯೆ? ಅದಕ್ಕೂ ಮುಂಚೆ ಇದ್ದ ಶಿಕ್ಷಣ ವ್ಯವಸ್ಥೆಗೂ, ಡಿ.ಪಿ.ಇ.ಪಿ.ಗೂ ಏನಾದರೂ ವ್ಯತ್ಯಾಸ ಕಂಡಿದ್ದೀರಾ? ಕರ್ನಾಟಕದ ಡಿ.ಪಿ.ಇ.ಪಿ. ಕಾರ್ಯಕ್ರಮ ಜಾಗತಿಕ ಬ್ಯಾಂಕ್‌ನ ಸಾಲದಡಿ ನಡೆಯುತ್ತಿದೆ ಎಂಬುದು ಸಂಬಂಧಪಟ್ಟವರಿಗೆ ತಿಳಿದಿದೆಯೇ? ಈಗ ಸಾಲದಿಂದ ನಡೆದಿರುವ ಈ ಕಾರ್ಯಕ್ರಮ ಮುಂದೆ ಸಾಲದ ಹಣ ಇಲ್ಲ ಎಂದಾಗ ಏನಾಗುವುದು? ಈಗ ಪಡೆದ ಸಾಲ, ಅದರ ಬಡ್ಡಿ ತೀರಿಸುವವರು ಯಾರು ಮತ್ತು ಯಾವಾಗ ಎಂಬುದು ಕೆಲವು ಪ್ರಶ್ನೆಗಳು.

## 6.7

ಶಿಕ್ಷಣ ಹಕ್ಕಾಗಬೇಕೆ ಬೇಡವೆ ಚರ್ಚಿಸಿ. ಹಕ್ಕು ಆಗಬೇಕು ಎಂದಾದಲ್ಲಿ ಏನೇನು ಸೌಕರ್ಯವಿದ್ದಲ್ಲಿ ಶಿಕ್ಷಣ ಒಂದು ಹಕ್ಕು ಆಗುವ ಸಾಧ್ಯತೆ ಇದೆ ಪರಿಶೀಲಿಸಿ. ಉದಾ : ಶಾಲೆ, ಕಟ್ಟಡ, ಶೌಚಾಲಯ, ಶೈಕ್ಷಣಿಕ ಸಾಮಗ್ರಿ, ಆಟದ ಮೈದಾನ ಇತ್ಯಾದಿ.

# INFORMATION ABOUT THE CHIDLREN IN SCHOOL OR OUT OF SCHOOL IN A COMMUNITY

Renewel No. ................ Village/Community : ................... Tq. _____ District : ........................... State : ..................................

This information is last finalised on.......... In the month of ................ Year ..................... , by Mr./Ms..............................................

| | Total Child | | | Pre Primary | | | CHILDREN IN SCHOOL - GOVERNMENT / PRIVATE / AIDED / UNAIDED / ASHRAM SCHOOLS OR IN REGULAR SCHOOL | | | | | | | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| Age | Population | | | School/Centre | | | Class 1 | | | Class 2 | | | Class 3 | | | Class 4 | | | Class 5 | | | Class 6 | | | Class 7 | | | | | |
| Years | M | F | Totl. | M | F | Totl. | M | F | Totl. | M | F | Totl. | M | F | Totl. | M | F | Totl. | M | F | Totl. | M | F | Totl. | M | F | Totl. | M | F | Totl. |
| 0-3 | | | | | | | | | | | | | | | | | | | | | | | | | | | | | | |
| 3-6 | | | | | | | | | | | | | | | | | | | | | | | | | | | | | | |
| 6-14 | | | | | | | | | | | | | | | | | | | | | | | | | | | | | | |
| 14-18 | | | | | | | | | | | | | | | | | | | | | | | | | | | | | | |
| TOTAL | | | | | | | | | | | | | | | | | | | | | | | | | | | | | | |

| | Total Child | | | CHILDREN IN SCHOOL - GOVERNMENT / PRIVATE / AIDED / UNAIDED / ASHRAM SCHOOLS OR IN REGULAR SCHOOL | | | | | | | | | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| Age | Population | | | Class 8 | | | Class 9 | | | Class 10 | | | PU 1 | | | PU 2 | | | Others | | | | | | | | | | | |
| Years | M | F | Totl. | M | F | Totl. | M | F | Totl. | M | F | Totl. | M | F | Totl. | M | F | Totl. | M | F | Totl. | M | F | Totl. | | | | | | |
| 0-3 | | | | | | | | | | | | | | | | | | | | | | | | | | | | | | |
| 3-6 | | | | | | | | | | | | | | | | | | | | | | | | | | | | | | |
| 6-14 | | | | | | | | | | | | | | | | | | | | | | | | | | | | | | |
| 14-18 | | | | | | | | | | | | | | | | | | | | | | | | | | | | | | |
| TOTAL | | | | | | | | | | | | | | | | | | | | | | | | | | | | | | |

| Age | Total Child | | | Out of | | | CHILDREN OUT OF SCHOOL BUT HAVING ALTERNATIVE EDUCATION IN NFE LIKE SYSTEM | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| Years | Population | | | PPE Edn. | | | Govt. run | | | Pvt. Run | | | NGO run | | | N.F.E. Totl. | | | OUT OF NFE OR ANYTHING | | | | | |
| | M | F | Totl. | M | F | Totl. | M | F | Totl. | M | F | Totl. | M | F | Totl. | M | F | Totl. | M | F | TOTAL | M | F | Totl. |
| 0-3 | | | | | | | | | | | | | | | | | | | | | | | | |
| 3-6 | | | | | | | | | | | | | | | | | | | | | | | | |
| 6-14 | | | | | | | | | | | | | | | | | | | | | | | | |
| 14-18 | | | | | | | | | | | | | | | | | | | | | | | | |
| TOTAL | | | | | | | | | | | | | | | | | | | | | | | | |

## INFORMATION ABOUT THE CHIDLREN IN SCHOOL OR OUT OF SCHOOL IN A COMMUNITY

Filled on Date.............. Month................ Year .................... By Mr./Ms..

| Children attending schools | M | F | TOTAL |
|---|---|---|---|
| In the same village/community | | | |
| In other villages/community | | | |
| Total | | | |

| Diferently abled children | M | F | TOTAL |
|---|---|---|---|
| | | | |
| In school | | | |
| 3 - 6 | | | |
| 6 - 14 | | | |
| 14 - 18 | | | |
| TOTAL | | | |
| | | | |
| Out of school | | | |
| 3 - 6 | | | |
| 6 - 14 | | | |
| 14 - 18 | | | |
| TOTAL | | | |
| | | | |
| Grand Total | | | |

| Children enrolled/re-enrolled to | M | F | TOTAL |
|---|---|---|---|
| schools in this year | | | |
| Class 1 | | | |
| Class 2 | | | |
| Class 3 | | | |
| Class 4 | | | |
| Class 5 | | | |
| Class 6 | | | |
| Class 7 | | | |
| Grand Total | | | |

| Total No. of children in | M | F | TOTAL | No.of Inst |
|---|---|---|---|---|
| Govt. PPC | | | | |
| Pvt. PPC | | | | |
| NGO PPC | | | | |
| Others | | | | |
| | | | | |
| Govt. Schools | | | | |
| Pvt. Schools | | | | |
| NGO schools | | | | |
| Others | | | | |
| TOTAL | | | | |

| Children in Hostels | M | F | TOTAL |
|---|---|---|---|
| Govt. run | | | |
| Pvt. Run | | | |
| NGO run | | | |
| Others | | | |
| TOTAL | | | |

| No. of teachers available per class | | | |
|---|---|---|---|
| | Govt | Pvt | NGO |
| Class 1 | | | |
| Class 2 | | | |
| Class 3 | | | |
| Class 4 | | | |
| Class 5 | | | |
| Class 6 | | | |
| Class 7 | | | |
| Class 8 | | | |
| Class 9 | | | |
| Class 10 | | | |
| Total | | | |

6.8

- ಮಕ್ಕಳು ಮಧ್ಯದಲ್ಲಿಯೇ ಶಾಲೆ ಬಿಡಲು ಕಾರಣ ಮತ್ತು ಅವರನ್ನು ಹಿಂದೆ ತರಲು ಇರುವ ಪ್ರಯತ್ನಗಳ ಬಗ್ಗೆ ವಿವರಿಸಿ.

  ಪ್ರಾಥಮಿಕ ಶಿಕ್ಷಣ ಭಾರತದ ಎಲ್ಲ ಮಕ್ಕಳಿಗೂ ಒಂದು ಮೂಲಭೂತ ಹಕ್ಕು ಆಗಬೇಕೆಂದು ಪ್ರತಿಪಾದಿಸುವ ಚಳವಳಿ ಭಾರತದಲ್ಲಿ ನಡೆದಿದೆ. ನಮ್ಮ ಸಂವಿಧಾನದಲ್ಲಿ ಈಗ ಇರುವ ಮೂಲಭೂತ ಹಕ್ಕುಗಳಲ್ಲಿ ಶಿಕ್ಷಣಕ್ಕೆ ಸ್ಥಾನವಿಲ್ಲ.

  'ಜೀವಿಸುವ ಹಕ್ಕು' ಎಲ್ಲರಿಗೂ ಸಂವಿಧಾನದತ್ತ ಹಕ್ಕು ಆಗಿರುವುದರಿಂದ, ಉತ್ತಮ ಜೀವನ ನಡೆಸಲು ಶಿಕ್ಷಣದ ಅವಶ್ಯಕತೆ ಇದೆಯೆಂದು ಹೇಳಿರುವ ಸರ್ವೋಚ್ಚ ನ್ಯಾಯಾಲಯವು ತನ್ನ ಒಂದು ತೀರ್ಪಿನಲ್ಲಿ, 'ಶಿಕ್ಷಣದ ಹಕ್ಕು ಪ್ರತ್ಯೇಕವಾಗಿ ಇಲ್ಲ, ಜೀವಿಸುವ ಹಕ್ಕಿನೊಡನೆ ಅದನ್ನು ಓದಬೇಕೆಂದು' ಹೇಳಿದೆ.

  ಸಂವಿಧಾನಕ್ಕೆ 83ನೇ ತಿದ್ದುಪಡಿಯನ್ನು ಸೂಚಿಸಿ ಒಂದು ಮಸೂದೆ ಲೋಕಸಭೆಯಲ್ಲಿ ಕುಳಿತಿದೆ! ಈ ತಿದ್ದುಪಡಿ ಭಾರತೀಯರಿಗೆ ಶಿಕ್ಷಣ ಒಂದು 'ಮೂಲಭೂತ ಹಕ್ಕು' ಎಂದು ಹೇಳುವುದು. ಆದರೆ ಈ ಮಸೂದೆಯ ಮಂಡನೆಯಾಗಲಿ, ತಿದ್ದುಪಡಿಯಾಗಲಿ ಆಗಲು ಸಾಕಷ್ಟು ರಾಜಕೀಯ ಇಚ್ಛಾಶಕ್ತಿಯ ಪ್ರಕಟಣೆಯಾಗಿಲ್ಲ. ಈ ಕುರಿತು ನಡೆದಿರುವ ಚಳವಳಿ ಮತ್ತು ಸಂಬಂಧಿತ ವಿಚಾರಗಳನ್ನು ತಿಳಿದುಕೊಳ್ಳಿ. ಚಳವಳಿಯಲ್ಲಿ ಭಾಗವಹಿಸಿ.

  ವಿವರಗಳಿಗೆ ಸಂಪರ್ಕಿಸಿ : CRY, National Law School of India University, ಬೆಂಗಳೂರು. ಮತ್ತು ನ್ಯಾಷನಲ್ ಅಲಿಯೆನ್ಸ್ ಫಾರ್ ಫಂಡಮೆಂಟಲ್ ರೈಟ್ ಟು ಎಜುಕೇಷನ್ (NAFRE)

## ಶಿಕ್ಷಣದ ಉದ್ದೇಶ



29

1. ಈ ಮುಂದಿನ ಧ್ಯೇಯೋದ್ದೇಶಗಳನ್ನು ಗಮನದಲ್ಲಿಟ್ಟುಕೊಂಡು ಮಕ್ಕಳಿಗೆ ಶಿಕ್ಷಣ ನೀಡಬೇಕು.

   ಮಕ್ಕಳು ಶಿಕ್ಷಣ ಪಡೆದಾಗ ಅವರ ವ್ಯಕ್ತಿತ್ವ, ಪ್ರತಿಭೆ, ಶರೀರ ಮತ್ತು ಮನಸ್ಸುಗಳ ವಿಕಾಸವಾಗಬೇಕು.

   ಅವರಿಂದ ಮಕ್ಕಳ ಹಾಗೂ ಮಾನವ ಹಕ್ಕುಗಳು, ಸ್ವಾತಂತ್ರ್ಯವನ್ನು ಗೌರವಿಸಲು ಸಹಾಯಕವಾಗಬೇಕು.

   ತನ್ನ ಬಗ್ಗೆ, ತನ್ನ ತಂದೆ, ತಾಯಿ, ಕುಟುಂಬ, ನೆರೆ ಹೊರೆ, ಭಾಷೆ, ಸಂಸ್ಕೃತಿ, ಜೀವನ ಮೌಲ್ಯ, ತನ್ನ ದೇಶ, ರಾಷ್ಟ್ರೀಯ ಮೌಲ್ಯಗಳು, ನಾಗರೀಕತೆ ಇವುಗಳ ಜತೆಗೆ ಇತರ ದೇಶೀಯರ ಇದೇ ಭಾವನೆಗಳಿಗೆ ಸ್ಪಂದಿಸುವ, ಗೌರವಿಸುವ ಮನೋಭಾವ ಮಕ್ಕಳಲ್ಲಿ ಬೆಳೆಯಬೇಕು.

   ಜಾತಿ, ವರ್ಗ, ಕುಲ, ಲಿಂಗ, ಧರ್ಮ ಇವು ಯಾವುವೂ ಅಡ್ಡ ಬರದಂತಹ ವಾತಾವರಣದಲ್ಲಿ ಎಲ್ಲರೊಡನೆ ಬೆರೆಯಲು, ಎಲ್ಲರ ಒಟ್ಟು ಅಭಿವೃದ್ಧಿಯ ಹೆಜ್ಜೆಯರಿತು ಬಾಳು ನಡೆಸಲು ಮಕ್ಕಳು ಸಿದ್ಧರಾಗಬೇಕು.

   ತನ್ನ ಸುತ್ತಮುತ್ತಲಿನ ನೈಸರ್ಗಿಕ ಪರಿಸರವನ್ನು ಗೌರವಿಸಿ ಅದರೊಡನೆ ಬಾಳಬೇಕು.

2. ಮಕ್ಕಳಿಗೆ ಶಿಕ್ಷಣ ನೀಡಬೇಕೆಂಬ ಆಶಯದೊಡನೆಯೇ ಇಲ್ಲಿ ಹಾಗೂ ಪರಿಚ್ಛೇದ 28ರಲ್ಲಿ ಹೇಳಿರುವ ಯಾವುದೇ ವಿಚಾರವನ್ನು ಶಿಕ್ಷಣ ಸಂಸ್ಥೆಗಳ ಸ್ಥಾಪನೆ ಮತ್ತು ನಡೆಸುವ ವಿಷಯದಲ್ಲಿ ನಿಯಂತ್ರಿಸುವ ಸಾಧನ ಎಂದು ಪರಿಗಣಿಸಬಾರದು. ಆದರೆ ಕನಿಷ್ಟ ಮಾನಕಗಳ ಮೂಲಕ ಉತ್ತಮ ಶಿಕ್ಷಣ ಮಕ್ಕಳಿಗೆ ದೊರೆಯುತ್ತದೆ ಎಂದು ಖಚಿತ ಪಡಿಸಿಕೊಳ್ಳಲು ಮಾತ್ರ ಬಳಸಬೇಕು.

   ಇದೆಲ್ಲವನ್ನು ನಾವು ಅನುಸರಿಸಿದ್ದೇ ಆದಲ್ಲಿ, ಯಾವುದೇ ಕೋಮು, ವರ್ಗ, ದೇಶಗಳ ನಡುವೆ ಘರ್ಷಣೆಗಳಾಗುವುದಿಲ್ಲ, ಯುದ್ಧವಾಗುವುದಿಲ್ಲ.



ಕಾನೂನು

◆ ಯಾವುದೇ ವಿಶೇಷ ಕಾನೂನು ಇಲ್ಲ.

ಚಟುವಟಿಕೆ

6.9

- ಸಾಧ್ಯವಾದಲ್ಲಿ ತರಗತಿ 1ರಿಂದ ಹಿಡಿದು 10ರ ತನಕ ಇರುವ ಎಲ್ಲ ಪಠ್ಯಪುಸ್ತಕಗಳನ್ನು ಒಮ್ಮೆ ಓದಿ ನಿಮ್ಮ ಅನಿಸಿಕೆಯನ್ನು ಶಿಕ್ಷಣ ಇಲಾಖೆಗೆ ನೀಡಿ. ಈ ಮೇಲಿನ ಆಶಯಗಳಿಗೆ ಅವು ಪೂರಕವಾಗಿದೆಯೇ ನೋಡಿ.



31

ಪರಿಚ್ಛೇದ

## ವಿಶ್ರಾಂತಿ ಮತ್ತು ಮನೋರಂಜನೆ

1. **ವಿಶ್ರಾಂತಿ ಮತ್ತು ವಿರಾಮ ಹೊಂದುವ, ತನ್ನ ವಯಸ್ಸಿಗೆ ತಕ್ಕಂತೆ ಆಟೋಟಗಳಲ್ಲಿ, ಮನೋರಂಜನೆ ಚಟುವಟಿಕೆಗಳಲ್ಲಿ ಭಾಗವಹಿಸುವ, ಕಲೆ, ಸಾಹಿತ್ಯ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಸೇರುವ ಅವಕಾಶ ಮಕ್ಕಳಿಗೆ ಸಿಗಬೇಕು.**
2. **ಇಂತಹುದರಲ್ಲಿ ಸಕ್ರಿಯ ಭಾಗವಹಿಸುವಿಕೆ ಯಾವುದೇ ಭೇದಭಾವವಿಲ್ಲದೆ ನಡೆಯಬೇಕು. ಇದು ಸರ್ಕಾರದ ಜವಾಬ್ದಾರಿ.**



ಕಾನೂನು

◆ **ಮೋಟಾರು ವಾಹನ ಸಾಗಣೆ ಕೆಲಸಗಾರರ ಕಾನೂನು** (Motor Transport Workers Act-1962) ಯಾವುದೇ ಕೆಲಸಗಾರರಿಗೆ ಪ್ರತಿ ನಾಲ್ಕು ಗಂಟೆಗಳ ಕೆಲಸಕ್ಕೆ ಕನಿಷ್ಠ ಅರ್ಧ ಗಂಟೆಗಳ ವಿರಾಮವಿರಬೇಕು.

◆ **ಬಾಲಕಾರ್ಮಿಕ ಪದ್ಧತಿ (ನಿಷೇಧ ಮತ್ತು ನಿಯಂತ್ರಣ) ಕಾನೂನು** [Child Labour (Regulation and Prohibition) Act-1986] ಪ್ರತಿ ಮೂರು ಗಂಟೆಗಳ ಕೆಲಸಕ್ಕೆ ಕನಿಷ್ಠ ಒಂದು ಗಂಟೆಯ ವಿರಾಮ, ಪ್ರತಿ ವಾರಕ್ಕೆ ಒಂದು ದಿನ ಸಂಬಳ ಸಹಿತ ರಜೆ ಕೊಡಬೇಕು. (31)

◆ ಕಾರ್ಖಾನೆ ಕಾನೂನಿನ (Factory Act-1948) ಪ್ರಕಾರ ಮಕ್ಕಳಿಗೆ ದಿನಕ್ಕೆ 4.30 ಗಂಟೆಗಳಿಗಿಂತ ಹೆಚ್ಚು ಮತ್ತು ರಾತ್ರಿ ದುಡಿಮೆ ಇರಬಾರದು.

17 ವರ್ಷದ ಆಸುಪಾಸಿನಲ್ಲಿರುವ ಹುಡುಗ/ಹುಡುಗಿ ಎಂದು ವೈದ್ಯರಿಂದ ದೃಢೀಕರಣಪತ್ರ ಪಡೆದಿದ್ದರೆ ಬೆಳಿಗ್ಗೆ 6 ರಿಂದ ಸಂಜೆ 7 ಗಂಟೆಯೊಳಗಿನ ಅವಧಿಯಲ್ಲಿ ಮಾತ್ರ ಕೆಲಸ ಮಾಡಲು ಅವಕಾಶ ಕೊಡಬಹುದು.

◆ **ತೋಟಗಳ ಕಾರ್ಮಿಕರ ಕಾನೂನು** (Plantation Labour Act-1951) ಹಾಗೂ **ಅಂಗಡಿ ಮುಗ್ಗಟ್ಟು ಕಾನೂನಿನ ಪ್ರಕಾರ** (Shops & Establishment Act) ಪ್ರತಿ 5 ಗಂಟೆಗಳ ಕೆಲಸಕ್ಕೆ ಒಂದು ಗಂಟೆಯ ವಿಶ್ರಾಂತಿ ಸಿಗಲೇಬೇಕು.

ಮಕ್ಕಳನ್ನು ದೃಷ್ಟಿಯಲ್ಲಿಟ್ಟುಕೊಂಡು ಮಾಡಿರುವ ಈ ಎಲ್ಲ ಕಾನೂನುಗಳು ಎಷ್ಟು ಸೂಕ್ತ ಮತ್ತು ಇವೆಲ್ಲವೂ ಎಂತಹ ವಿಪರ್ಯಾಸ ನೋಡಿ.

ಇದರಲ್ಲಿ ನೇರವಾಗಿ ಚರ್ಚಿಸಬೇಕಾಗಿರುವುದು ಇಂತಹ ಅವಕಾಶ ಸೃಷ್ಟಿ, ಗ್ರಾಮೀಣ ಹಾಗೂ ನಗರ ಪ್ರದೇಶಗಳ ಮಕ್ಕಳಿಗೆ ಒಂದೇ ರೀತಿ ಇದೆಯೆ ಎಂಬುದು. ಬದುಕಲು ದುಡಿಯಬೇಕಾಗಿರುವ ಮಕ್ಕಳಿಗೆ ಈ ಮೇಲಿನ ಪರಿಚ್ಛೇದ ಹೇಳುವ ಸಮಾಧಾನ ಏನು?

ಮಕ್ಕಳ ವಿಕಾಸವನ್ನು ಕುರಿತಾದ ಪರಿಚ್ಛೇದಗಳ ಚರ್ಚೆಯನ್ನು ಇಲ್ಲಿಗೆ ನಿಲ್ಲಿಸೋಣ. ನೀವೊಂದು ಸ್ವಯಂಸೇವಾ ಸಂಸ್ಥೆಯಾಗಿದ್ದಲ್ಲಿ ಈ ಮೇಲೆ ಹೇಳಿರುವ ಎಲ್ಲ ಪರಿಚ್ಛೇದಗಳಿಗೆ ನೀವು ಹೇಗೆ ಸ್ಪಂದಿಸಿರುವಿರೆಂದು ವಿಶ್ಲೇಷಣೆ ಮಾಡಿಕೊಳ್ಳಿ.

- ನೀವು ಇವೆಲ್ಲವನ್ನು ಗಮನಿಸಿದ್ದಲ್ಲಿ ಎಂತಹ ಕ್ರಮ ಕೈಗೊಂಡಿರುವಿರಿ ?
- ನಿಮಗೆ ತಿಳಿಯದಿರುವ, ತಿಳಿದೂ ಏನೂ ಮಾಡಲಾಗದ ವಿಚಾರಗಳು ಯಾವುದಾದರೂ ಇವೆಯೇ ?

ಇಲ್ಲಿಂದ ಮುಂದೆ ಮಕ್ಕಳ ಭಾಗವಹಿಸುವಿಕೆ ಎಂಬುದರ ಬಗ್ಗೆ ನೋಡೋಣ.

# ಮಕ್ಕಳ ಕುರಿತು ಚಿಂತಿಸಲು ಮಕ್ಕಳೂ ಸೇರಲಿ

ಒಂದೆರಡು ತಿಂಗಳ ಹಿಂದೆ ಒಂದು ಸಭೆ ನಡೆಯಿತು. ಮಕ್ಕಳ ಹಿತ ಕಾಪಾಡಲು ಎಂದು ಘೋಷಿಸಿದ ಸಭೆಯಲ್ಲಿ ಅನೇಕರು ಭಾಗವಹಿಸಿದ್ದರು. ಮಕ್ಕಳೂ ಇದ್ದರು. ಅವರನ್ನು ಕರೆದಾಗ ಬಂದು ವೇದಿಕೆಯಲ್ಲಿದ್ದ ಗಣ್ಯರಿಗೆ ಪುಷ್ಪ ಗುಚ್ಛ ನೀಡಿ ನಮಸ್ಕರಿಸಿದರು. ಹಾಡು ಹೇಳಿದರು. ಆಮೇಲೆ ನಮ್ಮ ಮನರಂಜನೆಗಾಗಿ ಟೇಪ್‌ರೆಕಾರ್ಡ್‌ನಲ್ಲಿ ಬಂದ ಹಾಡಿಗೆ ನರ್ತಿಸಿದರು.

ಸಭೆ ಏರ್ಪಡಿಸಿದ್ದವರು ಮೊದಲಿಂದ ಕೊನೆಯವರೆಗೂ ಆಗಾಗ ಹೇಳುತ್ತಿದ್ದರು - 'ನಮ್ಮ ಕಾರ್ಯಕ್ರಮಗಳಲ್ಲಿ ಮಕ್ಕಳಿಗೆ ಪ್ರಮುಖ ಪಾತ್ರವಿದೆ. ಅವರಿಲ್ಲದೆ ನಾವು ಏನೂ ಮಾಡುವುದಿಲ್ಲ.' ಆಮೇಲೆ ಅವರೆಲ್ಲಾ ಸೇರಿ ಮಕ್ಕಳ ಮಧ್ಯೆ ನಿಂತು ಫೋಟೋ ತೆಗೆಸಿಕೊಂಡರು. ಮಾರನೇ ದಿನ ಪತ್ರಿಕೆಗಳಲ್ಲಿ ಚಿತ್ರ ಸಮೇತ ದೊಡ್ಡ ವರದಿ ಬಂತು. ಈ ತರಹದ ಅನೇಕ ಕಾರ್ಯಕ್ರಮಗಳನ್ನು ನೀವು ನೋಡಿರಬಹುದು, ಭಾಗವಹಿಸಿರಬಹುದು, ಸಂಯೋಜಿಸಿರಲೂಬಹುದು. ಎಷ್ಟೋ ಬಾರಿ ಪ್ರಧಾನಿಗಳಂತಹ ಗಣ್ಯರು ಬರುವಾಗ ಬಿಸಿಲಲ್ಲಿ ರಸ್ತೆಯ ಇಕ್ಕೆಲಗಳಲ್ಲಿ ನಿಂತ ಬಾವುಟ ಬೀಸಲು ಮಕ್ಕಳನ್ನು ಕರೆದೊಯ್ದಿರಲೂಬಹುದು.

**ಮನೆಗಳಲ್ಲಿ ಈ ದೃಶ್ಯಗಳು ಸಾಮಾನ್ಯ :**

- 'ಮಗು ನಿನಗೆ ಕೆಂಪುಬಣ್ಣದ ಲಂಗ ತರ್ತೀವಿ'. 'ನಂಗೆ ಅದು ಬೇಡ. ಹಸಿರು ಬಣ್ಣದ್ದು ಬೇಕು', 'ನಾನು ಹೇಳಿದ್ದು ಕೇಳು, ಕೆಂಪು ಅಂದರೆ ಕೆಂಪು.'
- 'ನಮ್ಮ ಮಗಳನ್ನ ಸ್ವಾತಿ ಕಾನ್ವೆಂಟ್ಗೆ ಸೇರಿಸೋಣ', 'ನೋಡ್ರಿ ಅವಳು ನನ್ನ ಮಗಳು ಮಹಿಳಾ ಸದನಕ್ಕೇ ಹೋಗಬೇಕು,' 'ಸ್ವಾತಿಗೆ....', 'ಮಹಿಳಾ ಸದನಕ್ಕೆ....'. ಪುಟ್ಟ ಮಗು ತೊಟ್ಟಿಲಲ್ಲಿ ಕಾಲಾಡಿಸುತ್ತಾ ಆಡುತ್ತಿರುತ್ತದೆ.
- 'ಅಪ್ಪ ಇವತ್ತು ಪಾರ್ಕಿಗೆ ಹೋಗೋಣ', 'ಇಲ್ಲ ಇವತ್ತು ವಿಕ್ರಮದಲ್ಲಿ ಸಿನಿಮಾಕ್ಕೆ ಹೋಗೋಣ.'
- 'ಅಪ್ಪ ಮಳೆ ಯಾಕೆ ಬರುತ್ತೆ... ?, 'ಏ ಹೋಗೋ, ಸುಮ್ನೆ ತರಲೆ. ಒಂದು ನಿಮಿಷ ಆರಾಮವಾಗಿ ಇರಕ್ಕೆ ಬಿಡಲ್ಲ. ಟಿವಿ ಹಾಕೋ ?'
- 'ಅಮ್ಮಾ, ನಾವು ಈ ಮನೆ ಯಾಕೆ ಖಾಲಿ ಮಾಡ್ತಿದ್ದೀವಿ ?', 'ನಿನಗ್ಯಾಕೆ, ತೆಪ್ಪಗಿರು.'

**ಇಂತಹವೂ ಇರಬಹುದು :**

- 'ಮರಿ ಯಾವ ಬಟ್ಟೆ ಬೇಕು ತಗೋ.' 'ಹಸಿರು ಆಗಲಿ'
- 'ಅವಳು ಬೆಳೀಲಿ. ನೋಡೋಣ ಮಾತಾಡಕ್ಕೆ ಬಂದ ಮೇಲೆ ಕೇಳೋಣ. ಯಾವುದು ಬೇಕು ಅಂತ.'
- 'ಪಾರ್ಕ್‌ಗೆ ಅಂತಿದ್ರಲ್ಲಾ. ನನಗೆ ನಾಳೆ ಸಾಯಂಕಾಲ ಬಿಡುವಿದೆ. ಆಗತ್ತಾ ?'
- 'ಮಳೇನಾ ? ನಿನಗೆ ಏನನ್ಸುತ್ತೆ. ಮಳೆ ಬಂದರೆ ತಾನೆ ....'
- 'ನಮಗೆ ಈ ಪಾಟ ಬಾಡಿಗೆ ಕೊಡಕ್ಕಾಗಲ್ಲಪ್ಪ ಅದಕ್ಕೆ ಈ ಮನೆ ಬಿಡಬೇಕು.'

ಈ ಮೇಲಿನವುಗಳನ್ನು ಓದುತ್ತಿದ್ದಾಗ ನಿಮಗೆ ಏನನ್ನಿಸಿತು ? ಹೀಗೆ ಇರಬಹುದು ಅಥವಾ ಇಲ್ಲ. ನಿಮ್ಮ ಸುತ್ತಮುತ್ತಲಲ್ಲಿ, ನಿಮ್ಮ ಮನೆ, ಸಂಸ್ಥೆಗಳಲ್ಲಿ ಇಂತಹ ಮಾತುಗಳನ್ನು ಕೇಳಿರಬಹುದು. ಇಲ್ಲಿಯವರೆಗೆ ಮಕ್ಕಳ ಹಕ್ಕುಗಳ ಕುರಿತಾದ ಚರ್ಚೆಗಳಲ್ಲಿ ಉಳಿವು, ರಕ್ಷಣೆ ಹಾಗೂ ವಿಕಾಸದ ಬಗ್ಗೆ ತಿಳಿದ ನಿಮ್ಮ ಮುಂದೆ ಈಗ ಮಕ್ಕಳ ಭಾಗವಹಿಸುವಿಕೆಯ ಹಕ್ಕುಗಳು ಬಿಚ್ಚಿಕೊಳ್ಳುತ್ತಿವೆ. ಹಿಂದಿನ ಎಲ್ಲ ಅನುಚ್ಛೇದಗಳನ್ನು ಸುಲಭವಾಗಿ ಒಪ್ಪಬಹುದಾದರೂ ಮಕ್ಕಳೂ ನಮಗೆ ಸರಿಸಮಾನರಂತೆ ಯೋಚಿಸಲು, ಮಾತಾಡಲು, ಏನಾದರೂ ಮಾಡಲು ಕೈಹಾಕುತ್ತಾರೆ, ಅಭಿಪ್ರಾಯ ತಿಳಿಸುತ್ತಾರೆ, ಪ್ರಶ್ನಿಸುತ್ತಾರೆ, ವಿರೋಧಿಸುತ್ತಾರೆ ಎಂದರೆ

ಅರಗಿಸಿಕೊಳ್ಳಲು ಸ್ವಲ್ಪ ಕಷ್ಟ. ಒಡಂಬಡಿಕೆಯಲ್ಲಿ ಭಾಗವಹಿಸುವಿಕೆಯ ಬಗ್ಗೆ ಹೀಗೆ ಹೇಳಿದೆ: 'ಮಕ್ಕಳ ಅಭಿಪ್ರಾಯಗಳಿಗೆ ಮನ್ನಣೆ, ಸ್ವಾತಂತ್ರ್ಯ, ಮಾಹಿತಿಯ ಲಭ್ಯತೆ, ಚಿಂತನೆಗೆ, ಬುದ್ಧಿ ಬೆಳವಣಿಗೆಗೆ ಅವಕಾಶ ಮತ್ತು ಧಾರ್ಮಿಕ ಹಕ್ಕುಗಳು'. ಇದರ ಹಿನ್ನೆಲೆಗಿರುವ ಪ್ರಮುಖ ಅಂಶಗಳು ಇವು:

- ಮಗು ವಿಕಾಸ ಹೊಂದುತ್ತಿರುವ ಒಂದು ಮನುಷ್ಯಜೀವಿ. ಆ ಮಗುವಿಗೂ ಭಾವನೆಗಳು, ಅಭಿಪ್ರಾಯಗಳು ಇರುತ್ತವೆ.
- ತಮ್ಮ ಆವಶ್ಯಕತೆಗಳು ಏನು ಎಂಬುದನ್ನು ಸ್ಪಷ್ಟವಾಗಿ ಹೇಳಲು ಮಕ್ಕಳಿಗೆ ಸಾಧ್ಯವಿದೆ. ಅದಕ್ಕೆ ತಕ್ಕ ಅವಕಾಶವನ್ನು ಸೃಷ್ಟಿಸಿದರೆ, ಅವರಿಗೆ ಬೇಕಾದ ಸಹಾಯ ನೀಡಿದರೆ, ಮಿಗಿಲಾಗಿ ಅವರ ಮಾತುಗಳಿಗೂ ಗೌರವ ಇದೆ ಎಂಬ ವಾತಾವರಣ ಇದ್ದರೆ, ಅವರೂ ಸಹ ಅರ್ಥಪೂರ್ಣ ಹಾಗೂ ಜವಾಬ್ದಾರಿಯುತವಾದ ಅಭಿಪ್ರಾಯ, ಸಲಹೆ ಹಾಗೂ ನಿರ್ಧಾರಗಳನ್ನು ಮಾಡಬಹುದು.
- ಸಾಮಾನ್ಯವಾಗಿ ಮಕ್ಕಳು ಸುಳ್ಳು ಹೇಳರು. ಅವರಿಗೆ ಸತ್ಯ ಸುಳ್ಳಿನ ನಡುವಿನ ಅಂತರದ ಪರಿಚಯ ಮಾಡಿಸುವವರು ನಾವು. ಅವರಿಗೂ ಇತರರನ್ನು ಕಂಡರೆ ಕರುಣೆ, ವಿಶ್ವಾಸವಿರುತ್ತದೆ. ಅವರ ಪ್ರಶ್ನಿಸುವ, ತಿಳಿಯುವ ಮನೋಭಾವ, ಕಲ್ಪನಾಶಕ್ತಿ ಅತ್ಯಂತ ಬೆಲೆಯುಳ್ಳದ್ದು.
- ಈ ಮೇಲಿನವುಗಳನ್ನು ಆಧರಿಸಿ ಹೇಳುವುದಾದರೆ, ಮಕ್ಕಳನ್ನು ಕುರಿತಾದ ಮಾತುಕತೆ, ಚರ್ಚೆ, ವಿಚಾರಗಳಲ್ಲಿ ಅವರ ಅಭಿಪ್ರಾಯಗಳಿಗೆ ಅವಕಾಶ ಇದ್ದರೆ ಅಲ್ಲಿ ಹೊಸತನದ ಜೀವ ಬರುತ್ತದೆ.

ಈ ಹಿನ್ನೆಲೆಯಲ್ಲಿ ಮಕ್ಕಳ ಹಕ್ಕುಗಳ ಒಡಂಬಡಿಕೆಯಲ್ಲಿ ಸೂಚಿತವಾಗಿರುವ ಪರಿಚ್ಛೇದ 12, 13, 14, 15, 17 ಹಾಗೂ 18ನ್ನು ನೋಡೋಣ. ಇವುಗಳಲ್ಲಿ ಕೆಲವು ಈಗಾಗಲೇ ಹಿಂದಿನ ಲೇಖನಗಳಲ್ಲಿ ಚರ್ಚೆಗೆ ಬಂದಿವೆ. ಆದರೂ ಭಾಗವಹಿಸುವಿಕೆಯ ಹಿನ್ನೆಲೆಯಲ್ಲಿ ಮತ್ತೆ ಅವುಗಳನ್ನು ನೋಡುವುದು ವಿಹಿತ.

## ಅಭಿಪ್ರಾಯ ವ್ಯಕ್ತಪಡಿಸುವ ಹಕ್ಕು

12 ಪರಿಚ್ಛೇದ

**ತಮ್ಮ ಅಭಿಪ್ರಾಯಗಳನ್ನು ರೂಪಿಸಿಕೊಳ್ಳಲು ಸಮರ್ಥರಾದ ಮಕ್ಕಳಿಗೆ ತಮ್ಮನ್ನು ಕುರಿತಾದ ವಿಷಯ ವಿಚಾರಗಳ ಬಗ್ಗೆ ಯಾವುದೇ ಅಡ್ಡಿ ಆತಂಕಗಳು ಇಲ್ಲದಂತಹ ಮುಕ್ತ ವಾತಾವರಣದಲ್ಲಿ ಮಂಡಿಸಲು ಅವಕಾಶ ನೀಡಬೇಕು. ಮಕ್ಕಳ ಮನಸ್ಸಿನ ಪ್ರಬುದ್ಧತೆಯನ್ನು ಗಮನಿಸಿ, ಅವರ ಅಭಿಪ್ರಾಯಗಳಿಗೆ ಸೂಕ್ತ ಪ್ರಾಮುಖ್ಯತೆ ನೀಡಬೇಕು.**

**ಈ ನಿಟ್ಟಿನಲ್ಲಿ ಮಕ್ಕಳನ್ನು ಕುರಿತು ನ್ಯಾಯಿಕ ಹಾಗೂ ಆಡಳಿತಾತ್ಮಕ ಕಾರ್ಯವಿಧಾನಗಳ ಮೂಲಕ ನೇರವಾಗಿ ಅಥವಾ ತಮ್ಮ ಪ್ರತಿನಿಧಿಗಳ ಮೂಲಕ ಅಥವಾ ಸೂಕ್ತ ಮಂಡಲಿಗಳ ಮೂಲಕ, ರಾಷ್ಟ್ರೀಯ ಕಾಯ್ದೆ-ಕಾನೂನುಗಳ ವಿಧಾನಗಳಲ್ಲಿ ನೀಡಿರುವ ಅವಕಾಶಗಳಂತೆ ತಮ್ಮ ಅಭಿಪ್ರಾಯ ವ್ಯಕ್ತಪಡಿಸಲು ಮಕ್ಕಳಿಗೆ ಅವಕಾಶ ನೀಡಬೇಕು.**

ಕಾನೂನು

- ಭಾರತದ ಸಂವಿಧಾನ ಕಲಂ(19): ಭಾರತೀಯರಿಗೆಲ್ಲ ತಮ್ಮ ಅಭಿಪ್ರಾಯ ವ್ಯಕ್ತಪಡಿಸುವ ಮತ್ತು ಮಾತನಾಡುವ ಹಕ್ಕು ಇದೆ. ಇದು ಮಕ್ಕಳನ್ನು ಒಳಗೊಂಡಿದೆ.

  ಕಲಂ 25 ತಮ್ಮ ನಂಬುಗೆಯ ಧರ್ಮ, ಆಚಾರ-ವಿಚಾರವನ್ನು ನಡೆಸುವ ಪಾಲಿಸುವ ಅವಕಾಶವಿದೆ.
- ಮಕ್ಕಳಿಗೆ ನ್ಯಾಯ ಕಾನೂನು (JJ Act-1986) ಆಪಾದನೆಗೆ ಒಳಗಾದ ಮಗುವಿಗೆ ತನ್ನ ಬಗ್ಗೆ ಹೇಳಿಕೊಳ್ಳಲು ಹಾಗೂ ತನ್ನ ತಪ್ಪು ಮತ್ತು ಆ ಕುರಿತು ಆದ ನಡವಳಿಕೆಗಳ ಬಗ್ಗೆ ವಿವರಿಸಲು ಅವಕಾಶವಿದೆ. ವಿಚಾರಣೆಯ ಸಂದರ್ಭದಲ್ಲಿ ಮಕ್ಕಳ ಪೋಷಕರು ಇರಲು ಇದು ಅವಕಾಶ ನೀಡುತ್ತದೆ.

## ಮಾಹಿತಿ ಸ್ವಾತಂತ್ರ್ಯ

13 ಪರಿಚ್ಛೇದ

**ಮಕ್ಕಳಿಗೆ ಮಾಹಿತಿ ದೊರೆಯಬೇಕು, ಅವರಿಗೂ ತಮ್ಮ ಅಭಿಪ್ರಾಯ ವ್ಯಕ್ತಪಡಿಸುವ ಹಕ್ಕು ಇದೆ ಎಂದು ಕೇವಲ ಹೇಳಿದರೆ ಸಾಲದು. ತಮ್ಮ ಅಭಿಪ್ರಾಯವನ್ನು ಮಾತು, ಕೃತಿ, ಬರಹ, ಚಿತ್ರಕಲೆ ಅಥವಾ ಇನ್ನಿತರ ಮಾಧ್ಯಮಗಳ ಮೂಲಕ ತಮ್ಮ ಹಳ್ಳಿ, ಪಟ್ಟಣ, ರಾಜ್ಯ, ದೇಶ, ಹೊರದೇಶಗಳ ತನಕವೂ ತಲುಪಲು ,ಯಾವುದೇ ನಿರ್ಬಂಧಗಳಿಲ್ಲದೆ ಪಡೆಯಲು, ನೀಡಲು ಸಾಧ್ಯವಾಗಬೇಕು. ತಮ್ಮ ಬಗ್ಗೆ ಇತರರ ಬಗ್ಗೆ, ಅನೇಕ ವಿಚಾರ ವಿಮರ್ಶೆಗಳು ಅವರಿಗೆ ತಲುಪಬೇಕು.**

**ತಮಗೆ ಅನ್ನಿಸಿದ್ದನ್ನು ಎಂದು ಹೇಳುವಾಗ ಒಂದು ಚಿಕ್ಕ ಅಪಾಯವೂ ಇದ್ದೀತು. ಈ ಸ್ವಾತಂತ್ರ್ಯ ಬೇರೆಯವರಿಗೆ, ದೇಶದ ಗೌರವ ಬಾಧ್ಯತೆಗಳಿಗೆ ಎರವಾಗಬಾರದು. ನಮ್ಮ ನೈತಿಕ ಮಟ್ಟಗಳು ಕುಸಿಯುವಂತಾಗಬಾರದು. ಈ ಎಚ್ಚರಿಕೆ ಅತ್ಯಗತ್ಯ.**



14 ಒಡಂಬಡಿಕೆ

## ಆತ್ಮಸಾಕ್ಷಿ ಮತ್ತು ಧರ್ಮಪಾಲನೆ

**ಮಕ್ಕಳ ವಿಚಾರ, ಚಿಂತನೆ, ವಿವೇಚನೆ ಮತ್ತು ಧಾರ್ಮಿಕ ಸ್ವಾತಂತ್ರ್ಯಗಳಿಗೆ ಧಕ್ಕೆ ಬಾರದಂತೆ ಸರಕಾರ ನೋಡಿಕೊಳ್ಳಬೇಕು. ಈ ಹಕ್ಕು ಮಕ್ಕಳಿಗಿದೆ.**

**ಎಲ್ಲ ಮಕ್ಕಳೂ ಅವರ ತಂದೆತಾಯಿ ಅಥವಾ ಪೋಷಕರೊಡನೆ ಬೆಳೆಯುವುದು ಸಹಜ. ಬೆಳೆಯುತ್ತಿರುವ ಮಕ್ಕಳ ಬುದ್ಧಿ ಬೆಳವಣಿಗೆ, ಮನಸ್ಸಿನ ವಿಕಾಸಕ್ಕೆ ನೆರವಾಗಲು ಪ್ರಾಸಂಗಿಕವಾಗಿ ತಂದೆತಾಯಿಯರು ಮತ್ತು ಪೋಷಕರಿಗೆ ಹಕ್ಕು ಮತ್ತು ಕರ್ತವ್ಯಗಳಿವೆ. ಇದನ್ನೂ ಸಹ ಸರಕಾರವು ಮಾನ್ಯ ಮಾಡಲೇಬೇಕು.**

## ಸಂಘಟಿತರಾಗಿರುವ ಹಕ್ಕು



15 ಒಡಂಬಡಿಕೆ

**ಮಕ್ಕಳಿಗೂ ಇತರ ಮಕ್ಕಳೊಡನೆ ಜೊತೆಯಾಗಿರುವ ಸೇರುವ, ಸಾಂಘಿಕ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವ ಆವಶ್ಯಕತೆ ಇದೆ. ಇದನ್ನು ಒಂದು ಹಕ್ಕು ಎಂದು ಹೇಳಿ ಅವರು ಶಾಂತಿಯುತವಾಗಿ ಸಭೆ ಸೇರಲು ಸಹ ಸಾಧ್ಯವಾಗಬೇಕು ಎಂದೂ ಈ ಒಡಂಬಡಿಕೆ ಹೇಳುತ್ತದೆ.**



ಕಾನೂನು

- ಭಾರತದ ಸಂವಿಧಾನ ಕಲಂ(19) ಭಾರತೀಯರಿಗೆಲ್ಲ ಒಂದು ಸಂಘ, ಸಂಸ್ಥೆ ಕಟ್ಟಿಕೊಳ್ಳುವ ಸ್ವಾತಂತ್ರ್ಯವಿದೆ.
- **ಕಾರ್ಮಿಕ ಸಂಘಗಳ ಕಾನೂನು** (Trade Union Act 1926) ಸೆಕ್ಷನ್ 21ರ ಪ್ರಕಾರ 15 ವರ್ಷ ಮೇಲ್ಪಟ್ಟ ಮಕ್ಕಳು ಕಾರ್ಮಿಕರ ಸಂಘದ ಸದಸ್ಯರಾಗಬಹುದು. ಆದರೆ ಸಂಘದ ಪದಾಧಿಕಾರಿಗಳಾಗಲು 18 ವರ್ಷ ಆಗಿರಲೇಬೇಕು. (ಸೆಕ್ಷನ್-21ಎ)

ಈ ಹಿಂದೆ ಪರಿಚ್ಛೇದ 15ರ ಬಗ್ಗೆ ಹೇಳುತ್ತಾ ಆ ಹಕ್ಕು ಇತರರಿಗೆ ಹಾನಿಕಾರಕ ಆಗಬಾರದು ಎಂದು ಹೇಗೆ ಹೇಳಲಾಗಿತ್ತೋ ಅದೇ ರೀತಿ, ಈ ಮಕ್ಕಳು ಸಂಘ ಕಟ್ಟಿಕೊಳ್ಳುವುದಾಗಲೀ ಅಥವಾ ಸಭೆ, ಮೋರ್ಚಾ ನಡೆಸುವುದು ಸ್ಥಳೀಯ ಕಾಯ್ದೆ ಕಾನೂನುಗಳಿಗೆ ಅನುಸಾರವಾಗಿರಬೇಕು. ರಾಷ್ಟ್ರೀಯ ಸುಭದ್ರತೆ, ಸುರಕ್ಷತೆ, ಸಾರ್ವಜನಿಕ ಶಿಸ್ತು, ಹಿತಾಸಕ್ತಿ, ಸಾರ್ವಜನಿಕ ಆರೋಗ್ಯ, ನೈತಿಕತೆ ಮತ್ತು ಇತರರ ನ್ಯಾಯಬದ್ಧ ಹಕ್ಕುಗಳನ್ನು ಉಲ್ಲಂಘಿಸಬಾರದು. ಸರಕಾರವು ವಿನಾಕಾರಣ ಮಕ್ಕಳ ಜೊತೆಗೂಡುವಿಕೆ, ಸಂಘ, ಸಭೆಗಳನ್ನು ನಿರ್ಬಂಧಿಸಬಾರದು.

ಭಾರತದಲ್ಲಿ ಮಕ್ಕಳ ಸಂಘ ಎಂಬುದೇನೂ ಹೊಸತಲ್ಲ. ಆದರೆ ಒಂದಷ್ಟು ಮಕ್ಕಳು ಸೇರಿ ತಾವೊಂದು ನೋಂದಾಯಿತ ಸಂಘ ಮಾಡಿಕೊಳ್ಳುತ್ತೇವೆ, ನಮಗೆ ನಿರ್ದಿಷ್ಟ ಗುರಿ ಉದ್ದೇಶಗಳಿವೆ ಎಂದು ಮುಂದಾದಲ್ಲಿ ಅದಕ್ಕೆ ಮಾನ್ಯತೆ ಇಲ್ಲ. ಬೀದಿ ಮಕ್ಕಳು ಮತ್ತು ದುಡಿಯುವ ಮಕ್ಕಳ ಕೆಲವು ಗುಂಪುಗಳು ಈ ಬಗ್ಗೆ ಆಂದೋಲನವನ್ನೇ ನಡೆಸಿವೆ. ಅವರ ಮೊರೆ ಸರ್ವೋಚ್ಚ ನ್ಯಾಯಾಲಯದವರೆಗೂ ಹೋಗಿದೆ. ಆದಾಗ್ಯೂ ಭಾರತದ ಸಂವಿಧಾನ 18 ವರ್ಷದ ಒಳಗಿನವರನ್ನು ಯಾವುದೇ ನೋಂದಾಯಿತ ಸಂಘಗಳ ಸದಸ್ಯರನ್ನಾಗಿ ಒಪ್ಪಿಕೊಳ್ಳುವುದಿಲ್ಲ. ಸಂಘ ಕಟ್ಟಿಕೊಳ್ಳಲು ಅವಕಾಶ ಕೊಡುವುದಿಲ್ಲ ಎಂದು ಹೇಳಿ ಅವರ ಬೇಡಿಕೆಯನ್ನು ತಳ್ಳಿ ಹಾಕಲಾಗಿದೆ.

**7.1**



ಚಟುವಟಿಕೆ

- ನಿಮ್ಮ ಊರಿನಲ್ಲಿ ಮಕ್ಕಳ ಸಂಘಗಳಿವೆಯೇ ? ಇದ್ದರೆ ಅವರ ಧ್ಯೇಯೋದ್ದೇಶಗಳೇನು ತಿಳಿಯಿರಿ. ಆ ಸಂಘದ ನಿರ್ಮಾಣದಲ್ಲಿ ಮುಖ್ಯ ಪಾತ್ರ ವಹಿಸಿದವರಾರು ? ದೊಡ್ಡವರೋ ಚಿಕ್ಕವರೋ ? ಯಾರಿಗೆ ಎಷ್ಟು ಅಧಿಕಾರವಿದೆ? ಮಕ್ಕಳಿಗೆ ತಮ್ಮ ಸಂಘದ ಬಗ್ಗೆ ಏನು ತಿಳಿದಿದೆ ? ಅದರ ಚಟುವಟಿಕೆಗಳಲ್ಲಿ ಮಕ್ಕಳ ಭಾಗವಹಿಸುವಿಕೆ ಹೇಗಿದೆ? ತಿಳಿಯಿರಿ.
- ಮಕ್ಕಳ ಸಂಘಗಳ ಬಗ್ಗೆ ಹೆಚ್ಚು ತಿಳಿಯಲು ಸಂಪರ್ಕಿಸಿ : **ಭೀಮ ಸಂಘ, ಸಿ.ಡಬ್ಲ್ಯುಸಿ., ಬೆಂಗಳೂರು; ಏಳಿ ನಕ್ಷತ್ರಗಳು, ಏಕಲವ್ಯ, ಚಿತ್ರದುರ್ಗ.**

ಭಾಗವಹಿಸುವಿಕೆ ಎಂಬುದನ್ನು ಅರ್ಥ ಮಾಡಿಕೊಳ್ಳುವುದು ಸ್ವಲ್ಪ ಕಷ್ಟ. ದೊಡ್ಡವರು ತಮಗೆ ಅನುಕೂಲವಾದ ಅಥವಾ ತಮಗೆ ಸರಿಕಂಡಂತೆ ನಡೆಯುವುದು ಎಂದೆನಿಸಿದಾಗ ಭಾಗವಹಿಸುವಿಕೆಗೆ ಅವಕಾಶ ತೋರುತ್ತಾರೆ. ಯಾವಾಗ ತಮ್ಮ ನಿಲುವುಗಳಿಗೆ ಮಕ್ಕಳಿಂದ ಸಮರ್ಪಕವಾದ ಉತ್ತರ ಬರುವುದಿಲ್ಲ ಎಂದು ಗೊತ್ತಾಗುತ್ತದೋ ಆಗ ಅದು ಬೇರೆಯೇ ರೂಪ ತಾಳುತ್ತದೆ.

ಭಾಗವಹಿಸುವಿಕೆಯನ್ನು ಯಾವಾಗಲೂ ಸಾಂಘಿಕ ರೂಪದಲ್ಲೇ ನೋಡಬೇಕೆಂದೇನೂ ಇಲ್ಲ. ತಂದೆತಾಯಿ ಮಕ್ಕಳ ನಡುವೆ, ಕುಟುಂಬ, ಶಾಲೆ, ತರಗತಿ, ಆಟದ ಮೈದಾನ, ನಿರ್ಧಾರಗಳನ್ನು ಕೈಗೊಳ್ಳಬೇಕಾದಂತಹ ಪರಿಸ್ಥಿತಿಗಳು ಎಲ್ಲೆಡೆಯೂ ಕಾಣಬಹುದು. ಮುಖ್ಯ ಮಕ್ಕಳಿಗೂ ಅಭಿಪ್ರಾಯಗಳಿವೆ, ಅವರ ಮಾತಿಗೂ ಬೆಲೆಯಿದೆ ಎಂಬ ವಾತಾವರಣದ ಸೃಷ್ಟಿ ಮತ್ತು ಅವಕಾಶ ನೀಡುವುದು ಭಾಗವಹಿಸುವಿಕೆಯ ಮೂಲವಾದೀತು. ಒಂಟಿಯಾಗಿ ಒಬ್ಬ ವ್ಯಕ್ತಿ ತನ್ನ ನ್ಯಾಯಬದ್ಧವಾದ ಬೇಡಿಕೆ ಮುಂದಿಡುವುದೂ, ಒಂದಷ್ಟು ಜನ ಒಟ್ಟಾಗಿ ಸೇರಿ ತಮ್ಮ ಬೇಡಿಕೆ ಮುಂದಿಡುವುದಕ್ಕೂ ವ್ಯತ್ಯಾಸವಿದೆ. ಯಾವುದಕ್ಕೆ ಶಕ್ತಿ ಹೆಚ್ಚು ಎಂದು ಗಮನಿಸಿದರೆ, ಸಾಂಘಿಕ ಚಟುವಟಿಕೆಯ ಆವಶ್ಯಕತೆ ಕಾಣುವುದು. ಈ ಬಗ್ಗೆ ಮಕ್ಕಳೊಡನೆ ಚರ್ಚಿಸಲು ವಾಲ್ಟ್ ಡಿಸ್ನಿಯವರ ''ನ್ಯೂಸೀಸ್'' ಚಲನಚಿತ್ರ ನೋಡಿ ವಿಮರ್ಶಿಸಲು ಸಹಾಯಮಾಡಿ.



17 ಪರಿಚ್ಛೇದ

## ಮಾಧ್ಯಮಗಳು ಮತ್ತು ಮಾಹಿತಿ

**ನಮ್ಮ ಎಲ್ಲಾ ಚರ್ಚೆಗಳಲ್ಲಿ ಮಾಹಿತಿಯ ಲಭ್ಯತೆ ಎಂಬುದು ಒಂದು ಪ್ರಮುಖ ವಿಚಾರವಾಗಿ ಕಂಡು ಬರುತ್ತದೆ. ಇಂದಿನ ದಿನಗಳಲ್ಲಿ ಮಾಹಿತಿಯೇ ಶಕ್ತಿ ಎಂದು ಹೇಳಲಾಗುತ್ತದೆ. ಮಕ್ಕಳನ್ನು ಗಮನದಲ್ಲಿಟ್ಟುಕೊಂಡು ನೋಡಿದಾಗ ಅವರಿಗೂ ಮಾಹಿತಿಯ ಅಗತ್ಯತೆ, ಅದರಲ್ಲೂ ಸೂಕ್ತವಾದ ಮತ್ತು ಅವರ ಮಾನಸಿಕ, ದೈಹಿಕ, ನೈತಿಕ ಮೌಲ್ಯಗಳಿಗೆ ಧಕ್ಕೆ ಬಾರದಂತಹ, ಮಾಹಿತಿಯ ಅಗತ್ಯತೆ ಕಂಡುಬರುತ್ತದೆ. ಇದಕ್ಕಾಗಿ ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಮಟ್ಟದಲ್ಲಿ ವಿವಿಧ ಮೂಲಗಳಿಂದ ಸೂಕ್ತವಾದುದನ್ನು ಸಂಗ್ರಹಿಸಿ ಮಕ್ಕಳಿಗೆ ತಲುಪಿಸುವುದು ಸರಕಾರ ಹಾಗೂ ಸಂಬಂಧಿಸಿದವರ ಜವಾಬ್ದಾರಿ.**

**ಇವುಗಳಿಗೆ ಪೂರಕವಾಗುವಂತೆ ಸ್ಥಳೀಯ ಸಾಮೂಹಿಕ ಮಾಧ್ಯಮಗಳು ಚುರುಕಾಗಿ ಮಕ್ಕಳಿಗೆ ಅನುಕೂಲವಾಗುವಂತಹ ಅವರ ಸಾಮಾಜಿಕ, ಸಾಂಸ್ಕೃತಿಕ ಬೆಳವಣಿಗೆಗೆ ಪೂರಕವಾಗುವಂತಹ ಕೆಲಸ ಕೈಗೆತ್ತಿಕೊಳ್ಳಲು ಉತ್ತೇಜಿಸಬೇಕು.**

**ರಾಷ್ಟ್ರೀಯ, ಅಂತಾರಾಷ್ಟ್ರೀಯ ಮಟ್ಟದಲ್ಲಿ ವಿವಿಧ ಮೂಲಗಳಿಂದ ಮಾಹಿತಿ, ಸಾಮಗ್ರಿ, ಸಂಪನ್ಮೂಲಗಳನ್ನು ಸಂಗ್ರಹಿಸಿ, ವಿನಿಮಯ ಮಾಡಿ, ಪ್ರಕಾಶಿಸಿ ಸಮರ್ಪಕವಾಗಿ ಅವುಗಳು ಮಕ್ಕಳಿಗೆ ತಲುಪುವಂತೆ ವ್ಯವಸ್ಥೆ ಮಾಡಬೇಕು.**

**ಮಕ್ಕಳಿಗೆಂದೇ ಬರೆಯುವವರನ್ನು, ಪ್ರಕಾಶಿಸುವವರನ್ನು, ಪ್ರಸಾರ ಮಾಡುವವರನ್ನು ಗುರುತಿಸಿ ಉತ್ತೇಜಿಸಬೇಕು. ವಿವಿಧ ಭಾಷಾವಾರು ಪ್ರಾಂತಗಳಲ್ಲಿರುವ ಮಕ್ಕಳಿಗೆ, ಅಲ್ಲಿಯ ಮೂಲನಿವಾಸಿಗಳ ಮಕ್ಕಳಿಗೂ ತಲುಪುವಂತೆ ಸಾಹಿತ್ಯ ರಚನೆ, ಸಂಪರ್ಕ ಮಾಧ್ಯಮಗಳ ಬಳಕೆಗೆ ಉತ್ತೇಜಿಸಬೇಕು.**

**ಈ ನಮ್ಮ ಉಮೇದಿನಲ್ಲಿ ನಾವು ನೀಡುವ ಸಾಮಗ್ರಿಗಳು ಮಕ್ಕಳಿಗೆ ತೊಂದರೆಯಾಗದಂತೆ ನೋಡಿಕೊಳ್ಳಬೇಕು. ಈ ಹಿಂದೆ ಪರಿಚ್ಛೇದ 13ರಲ್ಲಿ ಹೇಳಿದಂತೆ ಹಾನಿಕಾರಕ ಮಾಹಿತಿಗಳು ಮಕ್ಕಳನ್ನು ತಲುಪದಂತೆಯೂ ನೋಡಿಕೊಳ್ಳಬೇಕು.**



ಕಾನೂನು

- **ಚಿಕ್ಕ ವಯಸ್ಸಿನವರ (ದುಷ್ಪರಿಣಾಮಕಾರಿ ಪ್ರಕಟಣೆಗಳ) ಕಾನೂನು.** (The Young Persons [Harmful Publications] Act-1956) ಚಿಕ್ಕ ವಯಸ್ಸಿನವರ ಮನಸ್ಸು, ಚಿಂತನೆ, ಬೆಳವಣಿಗೆಗೆ ಹಾನಿಕಾರಕವಾದ ಯಾವುದೇ ರೀತಿಯ ಪ್ರಕಟಣೆಗಳನ್ನು ತಡೆಗಟ್ಟಲು ಹಾಗೂ ಯಾರಾದರೂ ಇಂತಹ ಪ್ರಕಟಣೆಯಲ್ಲಿ ತೊಡಗಿದ್ದರೆ ಅಂತಹವರಿಗೆ ಶಿಕ್ಷಿಸಲು ಸರಕಾರಕ್ಕೆ ಅಧಿಕಾರವಿದೆ.
- **ಕೇಬಲ್ ದೂರದರ್ಶನ (ನಿಯಂತ್ರಣ) ಕಾನೂನು** (The Cable Television Network [Regulation] Act-1995) ಸೆಕ್ಷನ್-19. ಜನರ ಧರ್ಮ, ಭಾಷೆ, ಜನಾಂಗ, ಜಾತಿ ಅಥವಾ ಸಮುದಾಯಗಳನ್ನು ಗುರಿಪಡಿಸಿ ಸಮುದಾಯದಲ್ಲಿ ಅಸಹನೆ, ಯುದ್ಧ ಪ್ರಚೋದಿಸುವ ಯಾವುದೇ ಕೇಬಲ್ ಆಪರೇಟರನ್ನು ಬಂಧಿಸಿ, ವಿಚಾರಣೆಗೆ ಗುರಿಪಡಿಸಬಹುದು. ಮಕ್ಕಳ ಮನಸ್ಸನ್ನು ಕಲುಷಿತಗೊಳಿಸುವ ಯಾವುದೇ ಕಾರ್ಯಕ್ರಮ ಪ್ರಸಾರ ಮಾಡುವವರ ಮೇಲೆಯೂ ಇಂತಹ ಕ್ರಮ ಕೈಗೊಳ್ಳಬಹುದು.



ಟಿಪ್ಪಣಿ

ಇಲ್ಲಿ ಸ್ವಲ್ಪ ಚರ್ಚೆ ಆವಶ್ಯಕ.

**7.2**

ನಿಮ್ಮ ಊರಿನ ಶಾಲೆಗಳಲ್ಲಿ ಗ್ರಂಥಾಲಯ ಇದೆಯೇ ? ನಿಮ್ಮ ಸಮುದಾಯ ಇರುವಲ್ಲಿ ಸಾರ್ವಜನಿಕ ಗ್ರಂಥಾಲಯ ಇದೆಯೇ ? ಈ ಎರಡೂ ಸ್ಥಳಗಳಲ್ಲಿ ಗ್ರಂಥಾಲಯ ಇದ್ದರೂ ಅಲ್ಲಿಗೆ ಮಕ್ಕಳಿಗೆ ಪ್ರವೇಶ ಲಭ್ಯತೆ ಇದೆಯೇ ? ಮಕ್ಕಳಿಗೆಂದು ಪ್ರತ್ಯೇಕ ಸ್ಥಳವಿದೆಯೇ ? ಅಲ್ಲಿ ಮಕ್ಕಳ ಅಭಿರುಚಿಗೆ ತಕ್ಕುದಾದ ಪುಸ್ತಕಗಳು ಇವೆಯೇ ? ಅವು ಮಕ್ಕಳಿಗೆ ಲಭ್ಯವಿದೆಯೇ ?

**7.3**

ಈಗ ಪ್ರಕಟಣೆಯಲ್ಲಿರುವ ಎಷ್ಟು ಪತ್ರಿಕೆ, ನಿಯತಕಾಲಿಕೆಗಳಲ್ಲಿ ಮಕ್ಕಳ ಮನೋರಂಜನೆ, ಮನೋವಿಕಾಸಕ್ಕೆ ನೆರವಾಗುವ ಸಾಮಗ್ರಿಗಳು ಪ್ರಕಟವಾಗುತ್ತಿವೆ ಗಮನಿಸಿ. ಅಲ್ಲಿ ವಿವಿಧ ವಯೋಮಾನಕ್ಕೆ ಸ್ಪಂದಿಸುವ ವಿಚಾರಗಳಿವೆಯೇ?

**7.4**

ಮಕ್ಕಳಿಗೆಂದು ಬರೆಯುವವರ, ವಿವಿಧ ಸಮೂಹ ಮಾಧ್ಯಮಗಳ ಪ್ರಯೋಗದಿಂದ ಮಕ್ಕಳನ್ನು ತಲುಪುವವರ ಹೆಸರು, ವಿಳಾಸಗಳ ವಿವರಗಳು ಯಾರಿಂದಾದರೂ ಸಿಗುತ್ತದೆಯೇ ನೋಡಿ. ಮಕ್ಕಳ ಹಕ್ಕುಗಳ ಬಗ್ಗೆ ಏನಾದರೂ ಕೆಲಸ ಮಾಡಲು ಅಂತಹವರನ್ನು ಪ್ರಚೋದಿಸಿ.

ಈಗೀಗ ಮಕ್ಕಳಿಗೆಂದು ಸಾಕಷ್ಟು ಸಾಮಗ್ರಿಗಳು ಬರುತ್ತಿವೆ. ಆದರೆ ಅವುಗಳ ಬೆಲೆ ಮಾತ್ರ ದಿಗಿಲು ಹುಟ್ಟಿಸುತ್ತದೆ. ಇಂತಹ ಅನೇಕ ಸಾಮಗ್ರಿಗಳು ಇಂಗ್ಲಿಷ್‌ನಲ್ಲಿರುವುದೇ ಹೆಚ್ಚು. ಸ್ಥಳೀಯ ಭಾಷೆಗಳಲ್ಲಿ ವಿವಿಧ ಪ್ರಯತ್ನಗಳು ಸಾಗುತ್ತವೆ. ಆದರೆ ಅವುಗಳು ಎಲ್ಲ ಮಕ್ಕಳಿಗೂ ತಲುಪುವ ಬಗೆ ಮಾತ್ರ ಅನುಮಾನ.

ಪರಿಚ್ಛೇದ 17ನ್ನು ಬಹುಮುಖ್ಯ ಎಂದು ಪರಿಗಣಿಸಬೇಕು. ಇದು ಕೇವಲ ಭಾಗವಹಿಸುವಿಕೆಯ ಬಗ್ಗೆ ಮಾತ್ರ ಹೇಳುವುದಿಲ್ಲ. ಬದಲಿಗೆ ಮಕ್ಕಳ ಉಳಿವು, ರಕ್ಷಣೆ ಮತ್ತು ಅಭಿವೃದ್ಧಿಯತ್ತಲೂ ತನ್ನ ಪ್ರಭಾವವನ್ನು ಬೀರುತ್ತದೆ. ಮಕ್ಕಳನ್ನು ಕುರಿತಾಗಿ ಕೆಲಸ ಮಾಡುವವರೆಲ್ಲರೂ ಈ ಪರಿಚ್ಛೇದದ ಬಗ್ಗೆ ಗಂಭೀರವಾಗಿ ಯೋಚಿಸುವ ಅಗತ್ಯತೆ ಇದೆ. ಪರಿಚ್ಛೇದ 18ರ ಬಗ್ಗೆ ಲೇಖನ 9 'ಮಗುವಿನ ಹಿತದೃಷ್ಟಿಯಿಂದ' ನೋಡಿ.

**ಭಾಗವಹಿಸುವಿಕೆ :**

ಈ ಲೇಖನದ ಆರಂಭದಲ್ಲಿ ಕೆಲವು ಉದಾಹರಣೆಗಳನ್ನು ನೋಡಿದ್ದೀರಿ. ಅಲ್ಲಿ ನಾವು ಕಂಡಿದ್ದೇನು ? ನಮಗೆ ಯಾವುದೇ ಕಾರ್ಯಕ್ರಮದಲ್ಲಿ ಮಕ್ಕಳು ಇದ್ದರೆ ಚೆಂದ, ಎಂಥದೋ ಅರ್ಥ ಕಾಣುತ್ತದೆ. ಹೀಗಾಗಿ ಅವರಿರಲಿ. ಅವರೂ ಸಹ ಅಲ್ಲಿ ಜೋಡಿಸಿಟ್ಟ ಹೂಕುಂಡಗಳು, ಬರೆದು ನೇತು ಹಾಕಿದ ಬಟ್ಟೆ ಬ್ಯಾನರ್, ಧ್ವನಿವರ್ಧಕ ಅಲಂಕಾರ, ಹಿಂದೆ ತಗಲು ಹಾಕಿದ್ದ ಕರ್ಟನ್ ತರಹ ಆಗಿಬಿಡುವವರು.

ನಾವು ಮಕ್ಕಳ ಭಾಗವಹಿಸುವಿಕೆ ಬಗ್ಗೆ ಗಂಭೀರವಾಗಿ ಯೋಚಿಸಬೇಕೆಂದರೆ ಅವುಗಳನ್ನು ಕೆಲವು ಹಂತಗಳಲ್ಲಿ ನೋಡಬೇಕು. (ಈ ಮುಂದಿನದನ್ನು 'ಮಕ್ಕಳ ಹಕ್ಕುಗಳ ಒಡಂಬಡಿಕೆ, ತರಬೇತಿ ಕೈಪಿಡಿ'ಯಿಂದ ತೆಗೆದುಕೊಳ್ಳಲಾಗಿದೆ.)

- **ನಿಜವಾದ ಭಾಗವಹಿಸುವಿಕೆ ಇಲ್ಲದ ಹಂತಗಳು**

1. ದೊಡ್ಡವರು ಹೇಳಿಕೊಟ್ಟದ್ದಲ್ಲಿ ಮಕ್ಕಳು ಚಾಚೂ ತಪ್ಪದೆ ಮಾಡುವರು ಅಥವಾ ಹೇಳುವರು. ಅವರಿಗೆ ಅದರ ಏನು ಎತ್ತ ಅರ್ಥವಾಗುವುದಿಲ್ಲ. ನಿಮಗೇನು ಅನ್ನಿಸುತ್ತದೆ ಎಂದು ಮಕ್ಕಳನ್ನೇನೋ ಕೇಳುತ್ತೇವೆ. ಆದರೆ ಅವರು ಹೇಳಿದ್ದನ್ನು ಕೇಳುವವರಷ್ಟೆ. ಆದರೆ ಯಾವುದೇ ನಿರ್ಧಾರ ಕೈಗೊಳ್ಳಬೇಕಾದರೆ ಅವರ ಮಾತಿಗೆ ಯಾವ ಬೆಲೆ ಬಂದೀತು ಎಂಬುದು ಕಾಣುವುದೇ ಇಲ್ಲ. ಇದು MANIPULATION.

2. ಮಕ್ಕಳು ಇರಲಿ. ಅವರಿದ್ದರೆ ಅದು ಒಂದು ರೀತಿಯ ಚೆಂದದ ಅಲಂಕಾರ. ಅವರೂ ಭಾಗವಹಿಸುವವರೇ. ಹಾಡುವರು, ಕುಣಿಯುವರು, ನೀವು ಕೊಟ್ಟ ಟೀ-ಶರ್ಟ್, ಟೋಪಿ ಹಾಕಿಕೊಂಡು, ಅದರ ಮೇಲೆ ಏನಿದೆ ಎಂದು ಅರ್ಥವೇ ತಿಳಿಯದೆ, ಓಡಾಡುವವರು. ಇದೊಂದು ರೀತಿ ಕೇವಲ ಅಲಂಕಾರ.

3. ಯಾವುದಾದರೂ ಸಂಗತಿ ವಿಚಾರದ ಬಗ್ಗೆ ತಮಗೇನು ಅನ್ನಿಸುತ್ತದೆ ಎಂದು ಮಕ್ಕಳನ್ನು ಕೇಳಲಾಗುತ್ತದೆ. ಆದರೆ ಆ ಬಗ್ಗೆ ಏನು ಹೇಳಬೇಕು ಹೇಗೆ ಹೇಳಬೇಕು ಎಂಬುದರ ಬಗ್ಗೆ ವಿವಿಧ ರೀತಿಯ ಅವಕಾಶಗಳು ಇರುವುದಿಲ್ಲ. ಅವರು ಹೇಳಿದುದಕ್ಕೆ ಯಾವ ಬೆಲೆಯೂ ಇರದು. ಇದು ಕೇವಲ ತೋರಿಕೆ.

ಈ ಹಂತಗಳನ್ನು ಭಾಗವಹಿಸುವಿಕೆಯ ಹಂತಗಳೆಂದು ಹೇಳಬೇಕೆಂದೇನೂ ಇಲ್ಲ. ಭಾಗವಹಿಸುವಿಕೆಗೆ ಹೋಗಲು ಇದೇ ಸರಿಯಾದ ಹಂತಗಳೆಂದು ತಿಳಿಯಲೂ ಬಾರದು. ನಿಮ್ಮ ಅನುಭವ, ಚಿಂತನೆಗಳಿಗನುಗುಣವಾಗಿ ಈ ಹಂತಗಳಲ್ಲಿ ಬದಲಾವಣೆ ಬರಬಹುದು.

- **ಭಾಗವಹಿಸುವಿಕೆಯ ಆರಂಭ ಮತ್ತು ಹಂತಗಳು :**

4. ವಯಸ್ಕರು ಕೆಲವು ಯೋಜನೆಗಳನ್ನು ಮುಂದಿಡುತ್ತಾರೆ. ಮಕ್ಕಳೂ ಸಹ ಜೊತೆಗೂಡುತ್ತಾರೆ. ಇದರ ಜೊತೆ ಯಾಕೆ ತಾವು ಕೈ ಸೇರಿಸಬೇಕು ಎಂಬುದರ ಬಗ್ಗೆ ಮಕ್ಕಳಿಗೆ ಪೂರ್ಣ ಅರಿವಿರುತ್ತದೆ. ಹಿರಿಯರೇಕೆ ತಮ್ಮ ಅಭಿಪ್ರಾಯಕ್ಕೆ ಮನ್ನಣೆ ಕೊಡುವರು ಎಂಬ ತಿಳುವಳಿಕೆಯೂ ಇರುತ್ತದೆ. ಇದು ಹೀಗೆ ಮಾಡೋಣ ಎಂದು ಹೇಳಿ-ಕೇಳಿ ಮಾಡುತ್ತಾರೆ.

5. ಯಾವುದಾದರೂ ಯೋಜನೆ, ಕೆಲಸವನ್ನು ಹಿರಿಯರೇ ನಿರ್ಧರಿಸಿ ನಡೆಸುತ್ತಾರೆ. ಆದರೆ ಆ ಮೊದಲು ಮತ್ತು ಕೆಲಸ ಮಾಡುವಾಗ ಮಕ್ಕಳಿಂದ ಸಲಹೆ ತೆಗೆದುಕೊಳ್ಳುತ್ತಾರೆ. ಸಲಹೆ ನೀಡುವಾಗ ಮಕ್ಕಳಿಗೆ ಅದು ಯಾಕೆ, ಏನು, ಎತ್ತ ಎಂಬ ಪೂರ್ಣ ಅರಿವಿರುತ್ತದೆ.

6. ದೊಡ್ಡವರಿಗೊಂದು ಯೋಜನೆ, ವಿಚಾರ ಹೊಳೆಯುತ್ತದೆ. ಅದರ ಯೋಜನಾ ತಯಾರಿ, ನಿರ್ವಹಣೆಯ ಪ್ರತಿ ಹಂತದಲ್ಲೂ ಮಕ್ಕಳ ಭಾಗವಹಿಸುವಿಕೆ ಇರುತ್ತದೆ. ಮಕ್ಕಳ ಅಭಿಪ್ರಾಯಗಳನ್ನು ಕೇಳುವುದಷ್ಟೇ ಅಲ್ಲ, ನಿರ್ಧಾರಗಳನ್ನು ಮಾಡುವಾಗಲೂ ಅವರು ಕ್ರಿಯಾಶೀಲರಾಗಿರುತ್ತಾರೆ.

7. ಮಕ್ಕಳೇ ನಿರ್ಧರಿಸಿ, ಆರಂಭಿಸಿ ಮುನ್ನಡೆಸುತ್ತಾರೆ. ದೊಡ್ಡವರ ಸಹಾಯವಿರುತ್ತದೆ. ಆದರೆ ಅವರೇ ಎಲ್ಲವನ್ನೂ ಮಾಡುವುದಿಲ್ಲ.

8. ಮಕ್ಕಳಿಗೆ ಏನೋ ಒಂದು ಆಲೋಚನೆ ಬಂದಿತು ಎನ್ನಿ. ಒಂದು ಯೋಜನೆ, ಅದಕ್ಕೆ ಸಂಬಂಧಿಸಿದ ಕೆಲಸವೂ ಆರಂಭವಾಯಿತು. ಅವರಿಗೆ ಕಾಲಕಾಲಕ್ಕೆ ಬೇಕಾದ ಸಲಹೆ, ಸೂಚನೆಗಳಿಗೆ, ಸಹಾಯಕ್ಕೆ ದೊಡ್ಡವರ ಬಳಿ ಬರುತ್ತಾರೆ. ದೊಡ್ಡವರೇ ಎಲ್ಲವನ್ನೂ ನಿರ್ದೇಶಿಸುವುದಿಲ್ಲ. ಅವರಿಗಿರುವ ಅನುಭವದ ಆಧಾರದ ಮೇಲೆ ಸಲಹೆ ಕೊಡುತ್ತಾರೆ. ಅದೂ ಸಹ ಮಕ್ಕಳಿಗೆ ಒಪ್ಪಿಗೆಯಾದರೆ ಬಳಸಬಹುದು.

ಹೀಗೆ ಮಕ್ಕಳ ಭಾಗವಹಿಸುವಿಕೆ ಎಂಬುದು ವಿವಿಧ ಹಂತಗಳನ್ನು ದಾಟಿ ನಿಜವಾದ ಭಾಗವಹಿಸುವಿಕೆಯ ಹತ್ತಿರ ಬಂದೀತು. ಈ ಎಲ್ಲದರ ಸಾಧಕ-ಬಾಧಕಗಳ ಬಗ್ಗೆ ನೀವು ಚರ್ಚಿಸಬಹುದು. ಜೊತೆಗೆ ಮಕ್ಕಳು ನಮ್ಮಲ್ಲಿ ಭಾಗವಹಿಸುತ್ತಾರೆ ಎಂಬ ಅನೇಕ ಪೊಳ್ಳು ಮಾತುಗಳನ್ನು ವಿಶ್ಲೇಷಿಸಲೂಬಹುದು. ನಮ್ಮಲ್ಲಿ ಅನೇಕರು ಮೇಲೆ ಹೇಳಿದಂತೆ 4ನೇ ಹಂತವನ್ನೂ ದಾಟಿಲ್ಲ. ಎಲ್ಲೋ ಕೆಲವು ಕಡೆ 6ನೇ ಹಂತದ ಕೆಲಸ ಕಾಣಬಹುದು.

ಇಷ್ಟಾಗಿಯೂ ಭಾಗವಹಿಸುವಿಕೆಯನ್ನು ಅರ್ಥಮಾಡಿಕೊಳ್ಳಲು ಇನ್ನಷ್ಟು ಕೆಲಸ ಆಗಬೇಕಿದೆ. ಭಾರತದಂತಹ ಸಂಸ್ಕೃತಿಯಲ್ಲಿ ಮಕ್ಕಳ ಉಳಿವು, ರಕ್ಷಣೆ, ಅಭಿವೃದ್ಧಿಯನ್ನು ಒಪ್ಪಿಕೊಂಡಷ್ಟೇ ಬೇಗ ಭಾಗವಹಿಸುವಿಕೆಯನ್ನು ಒಪ್ಪುತ್ತಾರೆ ಎಂದರೆ ಸ್ವಲ್ಪ ಕಷ್ಟ.

ಮಕ್ಕಳ ಹಕ್ಕುಗಳು ನಿಜವಾಗಿ ಜಾರಿಯಾಗಬೇಕೆಂದರೆ ಮಕ್ಕಳ ಭಾಗವಹಿಸುವಿಕೆಯ ಬಗ್ಗೆ ಸಾರ್ವಜನಿಕವಾಗಿ ತೀವ್ರವಾದ ಚರ್ಚೆ ಆಗಬೇಕಿದೆ.



# ಮುಂದೆ ಸಾಗುವ ಮುನ್ನ......

ಮಕ್ಕಳು ಹಕ್ಕು ಎಂಬ ಕಲ್ಪನೆಯ ಬಗ್ಗೆ ವಿವರಗಳನ್ನು ಚರ್ಚಿಸುತ್ತಾ ಇಲ್ಲಿಯವರೆಗೂ ನಾವು ಬಂದಿದ್ದೇವೆ. ಇನ್ನು ಮುಂದೇನು ಎಂಬುದು ಪ್ರಶ್ನೆ. ಆ ಮೊದಲು ಒಡಂಬಡಿಕೆಯ ಮೂರನೆ ಭಾಗವಾದ ಕೊನೆಯ 9 ಪರಿಚ್ಛೇದಗಳತ್ತ ಒಮ್ಮೆ ದೃಷ್ಟಿ ಹಾಯಿಸೋಣ.

ಮಕ್ಕಳ ಹಕ್ಕುಗಳ ಒಡಂಬಡಿಕೆಯಲ್ಲಿರುವ ಎಲ್ಲಾ ಪರಿಚ್ಛೇದಗಳನ್ನು ಓದಿ ಅರ್ಥಮಾಡಿಕೊಂಡು ಜಗತ್ತಿನ ಎಲ್ಲಾ ದೇಶಗಳು ಒಪ್ಪಿ ಸಹಿ ಮಾಡಬಹುದು (ಪರಿಚ್ಛೇದ 46). ಈ ಒಡಂಬಡಿಕೆಯನ್ನು ಒಪ್ಪಿ ಆಯಾ ದೇಶಗಳು ಮಾನ್ಯ ಮಾಡಿದ ಮೇಲೆ ಇದರ ಪ್ರತಿಯನ್ನು ವಿಶ್ವ ಸಂಸ್ಥೆಯ ಪ್ರಧಾನ ಕಾರ್ಯದರ್ಶಿಗಳಿಗೆ ಕಳುಹಿಸಬೇಕು (ಪರಿಚ್ಛೇದ 47). ಮೇಲೆ ಹೇಳಿದಂತೆ, ಇದಕ್ಕೆ ಸಹಿ ಮಾಡಲು ಯಾವುದೇ ದೇಶವನ್ನು ನಿರ್ಬಂಧಿಸಲಾಗದು. ಯಾವುದೇ ದೇಶ ಯಾವಾಗ ಬೇಕಾದರೂ ಒಡಂಬಡಿಕೆಯನ್ನು ಒಪ್ಪಿ ಸಹಿ ಮಾಡಿ ಆ ದಾಖಲೆಯನ್ನು ವಿಶ್ವಸಂಸ್ಥೆಗೆ ಕಳುಹಿಸಬಹುದು (ಪರಿಚ್ಛೇದ 48). ಮಕ್ಕಳ ಹಕ್ಕುಗಳ ಒಡಂಬಡಿಕೆ ಅಂತಾರಾಷ್ಟ್ರೀಯ ಒಡಂಬಡಿಕೆಗಳಲ್ಲಿ 20ನೆಯದು. ಒಮ್ಮೆ ಇದನ್ನು ಒಪ್ಪಿದ ಮೇಲೆ ಇದು ಜಾರಿಗೆ ಬರಲು 30 ದಿನಗಳವರೆಗೆ ಕಾಲಾವಕಾಶವಿರುತ್ತದೆ. ಅಂತೆಯೇ ಆಯಾ ದೇಶಗಳು ಒಡಂಬಡಿಕೆಗೆ ಸಹಿ ಮಾಡಿ ವಿಶ್ವ ಸಂಸ್ಥೆಗೆ ಕಳುಹಿಸಿದ 30 ದಿನಗಳ ನಂತರ ಅದು ಜಾರಿ ಆಗಿದೆ ಎಂದು ಪರಿಗಣಿಸಬೇಕು **(ಪರಿಚ್ಛೇದ 49).**

ಈ ಒಡಂಬಡಿಕೆಗೂ ಸಹ ತಿದ್ದುಪಡಿಗಳಿಗೆ ಅದರಲ್ಲೇ ಅವಕಾಶ ಮಾಡಲಾಗಿದೆ. ತಿದ್ದುಪಡಿಯ ಸೂಚನೆಯನ್ನು ಯಾವುದಾದರೂ ಸದಸ್ಯ ರಾಷ್ಟ್ರ ನೀಡಬೇಕು. ಹಾಗೆ ನೀಡಿದ ತಿದ್ದುಪಡಿಯು ಜಾರಿಗೆ ಬರಲು ಸದಸ್ಯ ದೇಶಗಳು ಪರ ವಿರೋಧ ಮತ ನೀಡುವುದರ ಮೂಲಕ ಒಪ್ಪಿಗೆ ನೀಡಬಹುದು ಅಥವಾ ತಿರಸ್ಕರಿಸಬಹುದು. ಅದನ್ನು ವಿಶ್ವಸಂಸ್ಥೆಯು ಪರಿಶೀಲಿಸಿ ಒಪ್ಪಬಹುದು (ಪರಿಚ್ಛೇದ 50). ಈ ಒಡಂಬಡಿಕೆಗೆ ಯಾರದೇ ಆಕ್ಷೇಪಣೆಗಳು ಇದ್ದಲ್ಲಿ ಅವುಗಳನ್ನು ವ್ಯಕ್ತಪಡಿಸಲು ಅವಕಾಶವಿದೆ. ವಿನಾಕಾರಣವಾದ ತೀರಾ ಅಸಂಗತವಾದ ಆಕ್ಷೇಪಣೆಗಳಿಗೆ ಮಾನ್ಯತೆ ಇಲ್ಲ. ಆಕ್ಷೇಪಣೆ ನೀಡಿದವರು ಅವಶ್ಯ ಎನಿಸಿದಲ್ಲಿ ಅದನ್ನು ಹಿಂದೆ ತೆಗೆದುಕೊಳ್ಳಬಹುದು **(ಪರಿಚ್ಛೇದ 51).**

ಒಡಂಬಡಿಕೆಯನ್ನು ಒಪ್ಪಿದ ಯಾವುದೇ ದೇಶ ನಿರ್ದಿಷ್ಟ ಕಾರಣ ನೀಡಿ ತಾನು ಒಡಂಬಡಿಕೆಯಿಂದ ಹೊರಬರಲು ಇಚ್ಛಿಸಿದಲ್ಲಿ ಅದಕ್ಕೂ ಅವಕಾಶವಿದೆ. ಹಾಗೆ ಹೊರಬರಲು ಸೂಚನೆ ನೀಡಿದ ಒಂದು ವರ್ಷದ ನಂತರ ಅದು ಜಾರಿಗೆ ಬರುತ್ತದೆ. (ಪರಿಚ್ಛೇದ 52). ವಿಶ್ವ ಸಂಸ್ಥೆಯ ಪ್ರಧಾನ ಕಾರ್ಯದರ್ಶಿಗಳು ಈ ಒಡಂಬಡಿಕೆಗೆ ನ್ಯಾಸಧಾರಿಗಳು (ಪರಿಚ್ಛೇದ 53). ಮೂಲ ಪ್ರತಿಗಳನ್ನು ಅರಾಬಿಕ್, ಚೈನೀಸ್, ಇಂಗ್ಲೀಷ್, ಫ್ರೆಂಚ್, ರಶಿಯನ್, ಸ್ಪಾನಿಷ್ ಭಾಷೆಯ ನಕಲುಗಳನ್ನು ಇಡಲಾಗಿದೆ (ಪರಿಚ್ಛೇದ 54). (ಈ ಒಡಂಬಡಿಕೆಯ ಪ್ರತಿಗಳು ಈಗ ಜಗತ್ತಿನ ಎಲ್ಲ ಭಾಷೆಗಳಲ್ಲಿ ಲಭ್ಯವಿದೆ.)

ಇಲ್ಲಿನ ಮಕ್ಕಳ ಹಕ್ಕುಗಳ ಒಡಂಬಡಿಕೆಯ ಪೂರ್ಣ ವಿಚಾರಗಳು ನಿಮಗೆ ತಿಳಿದಂತಾಯಿತು. ಇನ್ನು ಮುಂದೆ ನೀವು ಏನು ಮಾಡಬಹುದು ಎಂಬುದು ಈಗಿನ ಪ್ರಶ್ನೆ.

ಇದಕ್ಕೆ ಉತ್ತರವಾಗಿ ನಾವು ಒಡಂಬಡಿಕೆಯ ಆಯ್ದ ಭಾಗಗಳನ್ನು ಮೊದಲು ಚೆನ್ನಾಗಿ ಅಭ್ಯಾಸ ಮಾಡಬೇಕು. ಇತರರೊಡನೆ ಮಾತನಾಡುವಾಗ ಈ ವಿಚಾರ ಎತ್ತಿಕೊಳ್ಳಬೇಕು. ಮಕ್ಕಳೊಡನೆ ವ್ಯವಹರಿಸುವಾಗ ಕಾಳಜಿ ವಹಿಸಬೇಕು. ಹಕ್ಕುಗಳ ಬಗ್ಗೆ ಕಾಳಜಿ ವಹಿಸಿ ಪ್ರಚಾರ ಮಾಡಬೇಕು. ಇಲ್ಲಿರುವ ಯಾವುದೂ ನಮ್ಮ ಸಂಸ್ಕೃತಿಯಿಂದ ಹೊರತಾಗಿ ಏನೂ ಇಲ್ಲ ಎನ್ನಬಹುದು. ನಮ್ಮ ನೆಲೆಗಟ್ಟುಗಳಲ್ಲಿ ಹಕ್ಕುಗಳನ್ನು ಅರ್ಥಮಾಡಿಕೊಂಡರೆ ಅದು ನಮ್ಮದೇ ಆಗುತ್ತದೆ.

ನಮ್ಮ ನಮ್ಮ ಕಾರ್ಯಕ್ಷೇತ್ರದಲ್ಲಿ ಹಿಂದೆ ಇದ್ದ ಮತ್ತು ಈಗ ಆಗಿರುವ ಬದಲಾವಣೆ (ಒಳಿತು, ಕೆಡಕು)ಗಳನ್ನು ಆಧರಿಸಿ ವರದಿ ತಯಾರಿಸಿ ಸಂಬಂಧ ಪಟ್ಟವರ ಗಮನಕ್ಕೆ ತರಬಹುದು. ಮಕ್ಕಳ ಹಕ್ಕುಗಳ ಪ್ರಚಾರ ಮಾಡಲು ಯೂನಿಸೆಫ್‌ನವರು ತಯಾರಿಸಿರುವ 'ಮೀನಾ' ಚಲನಚಿತ್ರವನ್ನು ಬಳಸಬಹುದು. ಕೈ ಮೊದಲಾದ ಸ್ವಯಂ ಸೇವಾ ಸಂಸ್ಥೆಗಳು ತಯಾರಿಸಿರುವ

ಭಿತ್ತಿ ಪತ್ರಗಳನ್ನು ಪ್ರದರ್ಶನಗಳಿಗಾಗಿ ಬಳಸಬಹುದು. ಮಕ್ಕಳ ಹಕ್ಕುಗಳ ಈ ವಿಚಾರ ಸಾರ್ವಜನಿಕ ವಿಚಾರವಾಗಬೇಕು. ಮನೆ ಮನೆಯ ಜೀವನದಲ್ಲಿ ಒಂದಾಗಬೇಕು.

ಮಕ್ಕಳ ಹಕ್ಕುಗಳನ್ನು ಈವರೆಗೆ 200ಕ್ಕೂ ಹೆಚ್ಚು ರಾಷ್ಟ್ರಗಳು ಒಪ್ಪಿಕೊಂಡಿವೆ. (ಜನವರಿ 2000). ಹಾಗೆಂದು ಆಯಾ ರಾಷ್ಟ್ರಗಳ ಜನರೆಲ್ಲರೂ ಒಪ್ಪಿಕೊಂಡಿದ್ದಾರೆ ಎಂದು ಹೇಳಲಾಗದು. ಈ ಬಗ್ಗೆ ಭಾರತದಲ್ಲೂ ಮಾತುಕತೆ ನಡೆದಿದೆ. ಲ್ಯಾಟಿನ್ ಅಮೇರಿಕಾದ ಕೆಲವು ಗುಂಪುಗಳು ಒಡಂಬಡಿಕೆಯಲ್ಲಿರುವ ಅನೇಕ ವಿಚಾರಗಳನ್ನು ವಿರೋಧಿಸುತ್ತವೆ. ಆಫ್ರಿಕಾದ ಕೆಲವು ಗುಂಪುಗಳು ಕೇವಲ ವಿರೋಧಿಸುವುದಷ್ಟೇ ಅಲ್ಲ ತಮ್ಮದೇ ಸಂಸ್ಕೃತಿಗೆ ಅನುಗುಣವಾಗಿ ತಾವು ಕೆಲವು ಪರಿಚ್ಛೇದಗಳನ್ನು ರಚಿಸುವ ಹುನ್ನಾರಿನಲ್ಲಿದ್ದಾರೆ.

ಇವುಗಳೊಂದಿಗೆ ಮಕ್ಕಳ ಹಕ್ಕುಗಳ ಜಾರಿಯಾಗಿ ಹತ್ತು ವರ್ಷಗಳು ಸಂದ ಸಂದರ್ಭದಲ್ಲಿ 2000ನೆ ವರ್ಷದಲ್ಲಿ ವಿಶ್ವಶೃಂಗ ಸಭೆ ನಡೆಯಲಿದೆ.

ಮಕ್ಕಳ ಬಗ್ಗೆ ಕಾಳಜಿ ಹೊಂದಿರುವ ಸಮಾಜದ ನಿರ್ಮಾಣಕ್ಕಾಗಿ ನಾವು ದುಡಿಯುತ್ತಿರುವವರಾದರೆ ಹಕ್ಕುಗಳ ಬಗ್ಗೆ ಇನ್ನಷ್ಟು ಹೆಚ್ಚಿನ ಅರಿವು ಪಡೆಯುವುದು ಅಗತ್ಯ. ಮಕ್ಕಳ ಬದುಕಿನ ಬಗ್ಗೆ ಸಂಶೋಧನೆಗಳಾಗಿ ಅದರ ಫಲ ಮಕ್ಕಳಿಗೆ ತಲುಪಬೇಕು. ಮಕ್ಕಳ ಹಕ್ಕು ಎಂಬುದು ಕೇವಲ ಭಾಷಣ, ದಿನಾಚರಣೆಗಳ ವಿಚಾರ ಎಂಬ ಪರಿಮಿತಿಯನ್ನು ಮೀರಿ ಬೆಳೆಯಬೇಕು.

ಬನ್ನಿ, ಭಾರತದ 40 ಕೋಟಿಗೂ ಮಿಕ್ಕಿರುವ ಮಕ್ಕಳ ಉತ್ತಮ ಭವಿಷ್ಯದ ನಿರ್ಮಾಣಕ್ಕಾಗಿ ಒಂದಿಷ್ಟು ಪ್ರಯತ್ನಪಡೋಣ. ನಾವು ಮಾಡುತ್ತಿರುವ ಕೆಲಸ ಕ್ಷೇತ್ರಗಳಲ್ಲಿ ಮಕ್ಕಳ ಹಕ್ಕುಗಳನ್ನು ಅಳವಡಿಸಿ ಅದಕ್ಕೆ ಅರ್ಥ ತರೋಣ.



# ಮಕ್ಕಳ ಹಕ್ಕುಗಳ ಒಡಂಬಡಿಕೆ

○ ಮಗುವಿನ ಹಿತದೃಷ್ಟಿಯಿಂದ

| ಪರಿಚ್ಛೇದ | ಸಾಮಾನ್ಯ | ಬದುಕು | ರಕ್ಷಣೆ | | | ಅಭಿವೃದ್ಧಿ | ಭಾಗವಹಿಸುವಿಕೆ | ಪುಟ ಸಂಖ್ಯೆ |
|---|---|---|---|---|---|---|---|---|
| | | | ತಾರತಮ್ಯತೆ | ಶೋಷಣೆ | ತುರ್ತುಸ್ಥಿತಿ | | | |
| 1 | ಮಗು/ಮಕ್ಕಳು ಎಂದರೇನು | | | | | | | 16 |
| 2 | | | ತಾರತಮ್ಯತೆಗೆ ಈಡಾಗದ ಸ್ವಾತಂತ್ರ್ಯ | | | | | 35 |
| ③ | ಎಲ್ಲ ರೀತಿಯಿಂದ ಮಕ್ಕಳ ಹಿತದೃಷ್ಟಿ | | | | | | | 50 |
| 4 | ಹಕ್ಕುಗಳ ಜಾರಿಗೆ ಕ್ರಮ ಕೈಗೊಳ್ಳುವುದು | | | | | | | 53 |
| 5 | | ಪೋಷಕರ/ಹೆತ್ತವರ ಜವಾಬ್ದಾರಿ ಗೌರವಿಸುವುದು | | | | ಪೋಷಕರ/ಹೆತ್ತವರ ಜವಾಬ್ದಾರಿ ಗೌರವಿಸುವುದು | | 16/53 |
| 6 | | ಉಳಿವು ಒಂದು (ಜೀವಿಸುವುದು) ಹಕ್ಕು | | | | | | 17 |
| 7 | | ಹೆಸರು ಮತ್ತು ರಾಷ್ಟ್ರೀಯತೆ ಹೊಂದುವ ಹಕ್ಕು | | | | | | 19 |
| 8 | | ಅನನ್ಯತೆ/ವ್ಯಕ್ತಿತ್ವ ಕಾಪಾಡುವ ಹಕ್ಕು | | | | | | 20 |
| ⑨ | | ಪೋಷಕರ ರಕ್ಷಣೆ ಹಾಗೂ ಅವರಿಂದ ಬೇರ್ಪಡದಿರುವುದು | | | | | | 20 |
| 10 | | | | ಪೋಷಕರೊಂದಿಗಿರುವ ಹಕ್ಕು | | | | 38 |
| 11 | | | | ಕಾನೂನಿಗೆ ವಿರುದ್ಧವಾಗಿ ಸ್ಥಳಾಂತರಗೊಳಿಸುವುದು ಮತ್ತು ಹಿಂದಿರುಗಿಸದಿರುವುದು | | ಕಾನೂನಿಗೆ ವಿರುದ್ಧವಾಗಿ ಸ್ಥಳಾಂತರಗೊಳಿಸುವುದು ಮತ್ತು ಹಿಂದಿರುಗಿಸದಿರುವುದು | | 38 |
| 12 | | | | | | ಅಭಿಪ್ರಾಯಗಳನ್ನು ಮುಕ್ತವಾಗಿ ವ್ಯಕ್ತಪಡಿಸುವ ಹಕ್ಕು | | 56/63 |
| 13 | | | | | | ಮಾಹಿತಿ ಹೊಂದುವ ಸ್ವಾತಂತ್ರ್ಯ ಹಾಗೂ ವ್ಯಕ್ತಪಡಿಸುವ ಹಕ್ಕು | | 57/63 |
| 14 | | | | | | ಆತ್ಮಸಾಕ್ಷಿಯಂತೆ ನಡೆಯುವ ಮತ್ತು ತಮಗೆ ಬೇಕಾದ ಧರ್ಮದ ಪಾಲನೆ | | 57/64 |

| ಪರಿಚ್ಛೇದ | ಸಾಮಾನ್ಯ | ಬದುಕು | ರಕ್ಷಣೆ | | | ಅಭಿವೃದ್ಧಿ | ಭಾಗವಹಿಸುವಿಕೆ | ಪುಟ ಸಂಖ್ಯೆ |
|---|---|---|---|---|---|---|---|---|
| | | | ತಾರತಮ್ಯತೆ | ಶೋಷಣೆ | ತುರ್ತುಸ್ಥಿತಿ | | | |
| 15 | | | | | | ಸಂಘಟಿತರಾಗಿರುವ ಹಕ್ಕು | | 57/64 |
| 16 | | | | ಸ್ವಕೀಯತೆಯ ರಕ್ಷಣೆ/ ಸ್ವಾತಂತ್ರ್ಯ | | | | 39 |
| 17 | | | | | | ಮಾಧ್ಯಮಗಳ ಪಾತ್ರ, ಮಾಹಿತಿ ಪಡೆಯುವ ಮತ್ತು ಪಸರಿಸುವ ಸ್ವಾತಂತ್ರ್ಯ | | 67/65 |
| ⑱ | ಮಕ್ಕಳ ಹಿತರಕ್ಷಣೆಯ ಜವಾಬ್ದಾರಿ ಪೋಷಕರ ಹಕ್ಕು | | | | | | | 51 |
| 19 | | ದುರುಪಯೋಗ ಮತ್ತು ನಿರ್ಲಕ್ಷ್ಯದಿಂದ ರಕ್ಷಣೆ | | ದುರುಪಯೋಗ ಮತ್ತು ನಿರ್ಲಕ್ಷ್ಯದಿಂದ ರಕ್ಷಣೆ | | | | 21/40 |
| ⑳ | | ಮನೆ ಮತ್ತು ಪೋಷಕರಿಲ್ಲದ ಮಕ್ಕಳ ರಕ್ಷಣೆ | | | | | | 22 |
| ㉑ | | ದತ್ತು ನೀಡುವಾಗ ವಹಿಸಬೇಕಾದ ಕಾಳಜಿ | | | | | | 49 |
| 22 | | | | | ನಿರಾಶ್ರಿತ ಮಕ್ಕಳ ರಕ್ಷಣೆ | | | 24/36 |
| 23 | | ಅಂಗವಿಕಲ ಮಕ್ಕಳಿಗೆ ರಕ್ಷಣೆ ಮತ್ತು ವಿಶೇಷ ಕಾರ್ಯಕ್ರಮಗಳು | | | | | | 27 |
| 24 | | ಆರೋಗ್ಯ ರಕ್ಷಣೆ ಒಂದು ಹಕ್ಕು | | | | | | 40 |
| 25 | | | | ರಕ್ಷಣೆ/ಪಾಲನೆಗೆ ಮಗುವನ್ನು ಇರಿಸಿದ್ದಲ್ಲಿ ಆ ಕುರಿತು ನಿಯತ ಕಾಲಿಕ ಪುನರ್ವಿಮರ್ಶೆ | | | | 28 |
| 26 | | ಸಾಮಾಜಿಕ ಭದ್ರತೆ ಮಕ್ಕಳ ಹಕ್ಕು | | | | | | 29 |
| 27 | | ಸೂಕ್ತ ಮಟ್ಟ | | | | | | 58 |
| 28 | | | | | | ಶಿಕ್ಷಣ | | 60 |
| 29 | | | | | | ಶಿಕ್ಷಣದ ಉದ್ದೇಶ | | |

| ಪರಿಚ್ಛೇದ | ಸಾಮಾನ್ಯ | ಬದುಕು | ರಕ್ಷಣೆ | | | ಅಭಿವೃದ್ಧಿ | ಭಾಗವಹಿಸುವಿಕೆ | ಪುಟ ಸಂಖ್ಯೆ |
|---|---|---|---|---|---|---|---|---|
| | | | ತಾರತಮ್ಯತೆ | ಶೋಷಣೆ | ತುರ್ತುಸ್ಥಿತಿ | | | |
| 30 | | ಅಲ್ಪ ಸಂಖ್ಯಾತ ಮಕ್ಕಳ ಸಾಂಸ್ಕೃತಿಕ, ಧಾರ್ಮಿಕ ಮತ್ತು ಭಾಷಾ ಹಕ್ಕುಗಳು | | | | | | 30/37 |
| 31 | | | | | | ವಿಶ್ರಾಂತಿ ಮತ್ತು ಮನೋರಂಜನೆ ಹಕ್ಕು | | 61 |
| 32 | | ಬಾಲಕಾರ್ಮಿಕರ ಪುನರ್ವಸತಿ | | ಹಣಗಳಿಕೆಗಾಗಿ ಮಕ್ಕಳನ್ನು ಶೋಷಿಸುವುದರ ವಿರುದ್ಧ ರಕ್ಷಣೆ | | | | 31/41 |
| 33 | | ಮಾದಕ ದ್ರವ್ಯಗಳ ವಿತರಣೆಗೆ ತಡೆ | | | | | | 31 |
| 34 | | | | ಲೈಂಗಿಕ ಶೋಷಣೆ ವಿರುದ್ಧ ರಕ್ಷಣೆ | | | | 42 |
| 35 | | | | ಮಕ್ಕಳ ಅಪಹರಣ, ಮಾರಾಟ, ತಡೆಹಿಡಿದಿಡುವ ವಿರುದ್ಧ ರಕ್ಷಣೆ | | | | 43 |
| 36 | | | | ಎಲ್ಲ ರೀತಿಯ ಶೋಷಣೆಗಳ ವಿರುದ್ಧ ರಕ್ಷಣೆ | | | | 44 |
| 37 | | | | ಚಿತ್ರಹಿಂಸೆ ಮತ್ತು ಮರಣ ದಂಡನೆ ಯನ್ನು ಮಕ್ಕಳಿಗೆ ವಿಧಿಸಬಾರದು | | | | 45/52 |
| 38 | | ಯುದ್ಧದಲ್ಲಿ ಮಕ್ಕಳನ್ನು ತೊಡಗಿಸಬಾರದು | | | | | | 32 |
| 39 | | | | ಪುನರ್ವಸತಿ, ವ್ಯವಸ್ಥೆ ಹೊಂದುವ ಹಕ್ಕು | | | | 46 |
| 40 | | | | ಮಕ್ಕಳಿಗೆ ನ್ಯಾಯ ಒದಗಿಸುವುದು | | | | 47/52 |
| 41 | ಮೇಲ್ಪಟ್ಟದ ಸಾರ್ವಭೌಮತೆ | | | | | | | 53 |
| 42 | ಹಕ್ಕುಗಳ ಕುರಿತು ಸರಕಾರ ಪ್ರಚಾರ ಮಾಡಬೇಕು | | | | | | | 26 |
| 43 | ಮಕ್ಕಳ ಹಕ್ಕುಗಳ ರಕ್ಷಣೆಗಾಗಿ ಸಮಿತಿ ರಚನೆ | | | | | | | 26 |
| 44 | ಹಕ್ಕು ಜಾರಿ ಕುರಿತು ವಿಶ್ವ ಸಂಸ್ಥೆಗೆ ವರದಿ ಮತ್ತು ಆ ಕುರಿತು ಪ್ರಚಾರ | | | | | | ಸಿ.ಆರ್.ಸಿ ಜಾರಿ ಕುರಿತು ಮಕ್ಕಳು ವರದಿ ಕಳುಹಿಸುವುದು | 26 |

| ಪರಿಚ್ಛೇದ | ಸಾಮಾನ್ಯ | ಬದುಕು | ರಕ್ಷಣೆ | | | ಅಭಿವೃದ್ಧಿ | ಭಾಗವಹಿಸುವಿಕೆ | ಪುಟ |
|---|---|---|---|---|---|---|---|---|
| | | | ತಾರತಮ್ಯತೆ | ಶೋಷಣೆ | ತುರ್ತುಸ್ಥಿತಿ | | | |
| 45 | ಅಂತಾರಾಷ್ಟ್ರೀಯ ಸಹಕಾರಗಳು-ಪರ್ಯಾ ವರದಿ | | | | | | | 26 |
| 46 | ಒಡಂಬಡಿಕೆ ಒಪ್ಪಲು ಎಲ್ಲ ಸರಕಾರ/ದೇಶಗಳಿಗೆ ಅವಕಾಶ | | | | | | | 68 |
| 47 | ವಿಶ್ವಸಂಸ್ಥೆಯಲ್ಲಿ ಸಿ.ಆರ್.ಸಿ ಒಪ್ಪಿಗೆ ಕುರಿತು ದಾಖಲೆ | | | | | | | 68 |
| 48 | ಸರಕಾರ/ದೇಶಗಳು ಸಿ.ಆರ್.ಸಿ ಒಪ್ಪಿ ವಿಶ್ವಸಂಸ್ಥೆಗೆ ಮಾಹಿತಿ | | | | | | | 68 |
| 49 | ಸಿ.ಆರ್.ಸಿ ಜಾರಿ ಆಯಾ ದೇಶಗಳಲ್ಲಿ ಹೇಗೆ ವಿವರ | | | | | | | 68 |
| 50 | ಸಿ.ಆರ್.ಸಿ ತಿದ್ದುಪಡಿ ಸಾಧ್ಯತೆಗಳು ಮತ್ತು ಹೇಗೆ | | | | | | | 68 |
| 51 | ಸಿ.ಆರ್.ಸಿ ಗೆ ದೇಶಗಳಿಂದ ಆಕ್ಷೇಪಣೆ ಸಲ್ಲಿಕೆ ಹೇಗೆ | | | | | | | 68 |
| 52 | ಸಿ.ಆರ್.ಸಿ ಯಿಂದ ಹೊರಬರಲು ಅವಕಾಶ | | | | | | | 68 |
| 53 | ವಿಶ್ವಸಂಸ್ಥೆಯ ಪ್ರಧಾನ ಕಾರ್ಯದರ್ಶಿಯ ಪಾತ್ರ | | | | | | | 68 |
| 54 | ವಿವಿಧ ಭಾಷೆಗಳಲ್ಲಿ ಸಿ.ಆರ್.ಸಿ. | | | | | | | 68 |

ನಿಮ್ಮ ಟಿಪ್ಪಣಿಗಳು

# ಭಾರತದಲ್ಲಿ ಜಾರಿಯಲ್ಲಿರುವ ಕಾನೂನುಗಳಲ್ಲಿ ಮಕ್ಕಳು

| | | | | CRC ARTICLE |
|---|---|---|---|---|
| | | ಮುಸಲ್ಮಾನರ ವೈಯಕ್ತಿಕ ಕಾನೂನು | Muslims personal Laws<br>Juvenile Smoking Acts | 9 |
| 1860 | Criminal Law | ಭಾರತೀಯ ದಂಡ ಸಂಹಿತೆ | Indian Penal Code | 1,6,10,19,34,<br>35,40 |
| 1872 | Civil Law | ಭಾರತೀಯ ಕರಾರು ಕಾನೂನು | The Indian Contract Act | |
| 1875 | Civil Law | ಭಾರತೀಯ ಪ್ರೌಢತೆ ಕಾನೂನು | Indian Majority Act | 1 |
| 1880 | | ರೋಗ ನಿರೋಧಕ ಚುಚ್ಚುಮದ್ದು ಕಾನೂನು | Vaccination Act | 24 |
| 1882 | Civil Law | ಭಾರತೀಯ ವಿಶ್ವಸ್ಥ (ಟ್ರಸ್ಟ್) ಕಾನೂನು | The Indian Trust Act | |
| 1890 | Adoption | ಪೋಷಕರು ಮತ್ತು ಮಕ್ಕಳ ಕಾನೂನು | Guardians and Wards Act | 12,25 |
| 1926 | Labour Law | ಕಾರ್ಮಿಕ ಸಂಘಗಳ ಕಾನೂನು | Trade Unions act | 15 |
| 1929 | Family Law | ಬಾಲ್ಯ ವಿವಾಹ ತಡೆ ಕಾನೂನು | The Child Marriage Restraint Act | 1 |
| 1933 | Labour Act | ಮಕ್ಕಳನ್ನು ಅಡವಿಡುವ (ಜೀತದಲ್ಲಿ ದುಡಿಸುವ) ಕಾನೂನು | The Children (Pledging of Labour) Act | 35 |
| 1948 | Labour Laws | ಕಾರ್ಖಾನೆ ಕಾನೂನು | The Factories Act | 1,31,32 |
| 1948 | Labour Laws | ಕನಿಷ್ಟ ಮಜೂರಿ ಕಾನೂನು | The Minimum Wages Act | 1 |
| 1950 | | ಭಾರತದ ಸಂವಿಧಾನ | The Constitution of India | 2,6,7,14,15,<br>24,27,28,<br>30,32,35,36, |
| 1951 | Labour Laws | ತೋಟಗಳ ಕಾರ್ಮಿಕ ಕಾನೂನು | Plantation Labour Act | 1,31 |
| 1952 | Labour Laws | ಗಣಿ ಕಾನೂನು | The Mines Act | 1,32 |
| 1955 | Family Law | ಹಿಂದೂ ವಿವಾಹ ಕಾನೂನು | The Hindu Marriage Act | 1,8,9 |
| 1955 | Social Legisn. | ಭಾರತೀಯ ಪೌರತ್ವ ಕಾನೂನು | The Indian Citizenship Act | 7 |
| 1955 | Social Legisn. | ನಾಗರೀಕ ಹಕ್ಕುಗಳ ರಕ್ಷಣೆ ಕಾನೂನು | The Protection of Civil Rights | 2 |
| 1956 | Family Law | ಹಿಂದೂ ದತ್ತು ಮತ್ತು ನಿರ್ವಹಣಾ ಕಾನೂನು | The Hindu Adoption &<br>Maintenance Act | 1,12,21 |
| 1956 | Family Law | ಹಿಂದೂ ಅಪ್ರಾಪ್ತ ವಯಸ್ಕರು ಮತ್ತು ಪೋಷಕರ ಕಾನೂನು | The Hindu Minority &<br>Guardianship Act | 1,5,9,18 |
| 1954 | Family Law | ವಿಶೇಷ ವಿವಾಹ ಕಾನೂನು | Special Marriage Act | 8 |
| 1956 | Criminal Law | ಅನೈತಿಕ ವ್ಯವಹಾರ (ತಡೆ) ಕಾನೂನು | Immoral Traffic (Prevention) Act | 1,34,35 |
| 1956 | Criminal Law | ಚಿಕ್ಕ ವಯಸ್ಸಿನವರ (ದುಷ್ಪರಿಣಾಮಕಾರಿ ಪ್ರಕಟಣೆಗಳ) ಕಾನೂನು | The young persons<br>(Harmful Publications) Act | 17 |
| 1956 | Civil Law | ಹಿಂದೂ ಉತ್ತರಾಧಿಕಾರಿ ಕಾನೂನು | The Hindu succession Act | |
| 1958 | Labour Laws | ವ್ಯಾಪಾರಿ ಹಡಗು ಕಾನೂನು | The Merchant Shipping Act | 1 |
| 1958 | Social Legn. | ತಪ್ಪು ಮಾಡಿದವರ ಮೇಲ್ವಿಚಾರಣೆ ಕಾನೂನು | The Probation of Offenders Act | 40,32 |
| 1960 | Social Legn. | ಅನಾಥಾಲಯಗಳು ಮತ್ತು ಇತರೆ ಧರ್ಮಾಲಯಗಳ (ಮೇಲ್ವಿಚಾರಣೆ ಮತ್ತು ಹತೋಟಿ) ಕಾನೂನು | The Orphanages and Other Charitable Homes (Supervision and Control) Act | |

| | | | | |
|---|---|---|---|---|
| 1966 | Labour Law | ಬೀಡಿ ಮತ್ತು ಸಿಗಾರ್ ಕೆಲಸಗಾರರ (ವೃತ್ತಿಸ್ಥಿತಿ-ಗತಿ) ಕಾನೂನು | Beedi and Cigar Workers (Condition of Employment) Act | 1, 32 |
| 1961 | Labour Law | ವೃತ್ತಿ ಶಿಕ್ಷಣ ಕಾನೂನು | Apprentice Act | 1, 32 |
| 1961 | Social Legn. | ಪ್ರಸೂತಿ ಸೌಲಭ್ಯ ಕಾನೂನು | The Maternity Benefit Act | |
| 1962 | Labour Law | ಸಾರಿಗೆ ಮೋಟಾರು ಕೆಲಸಗಾರರ ಕಾನೂನು | Motor Treansport Workers Act | 1, 31, 32 |
| 1965 | Labour Law | ಬೋನಸ್ ಪ್ರಾಪ್ತಿ ಕಾನೂನು | The Payment of Bonus Act | |
| 1969 | Social Legn. | ಜನನ-ಮರಣ ದಾಖಲೆ ಕಾನೂನು | Registration of Births and Deaths Act | 7 |
| 1973 | Criminal Law | ಅಪರಾಧ ದಂಡ ಸಂಹಿತೆ | The Code of Criminal Procedure | |
| 1974 | | ರಾಷ್ಟ್ರೀಯ ಮಕ್ಕಳ ನಿಯಮ | National Policy for Children | 3 |
| 1976 | Labour Law | ಜೀತ ವಿಮುಕ್ತಿ ಮತ್ತು ನಿಷೇಧ ಕಾನೂನು | The Bonded Labour System (Abolition) Act | 35 |
| 1978 | Family Law | ಬಾಲ್ಯ ವಿವಾಹ ತಡೆ ಕಾನೂನು | Child Marriage Restraint Act | 1 |
| 1981 | Family Law | ವಿವಾಹ ಕಾನೂನು (ತಿದ್ದುಪಡಿ) | Marriage Laws (Amendment) Act | 19 |
| 1984 | Family Law | ಅಂತಾರಾಷ್ಟ್ರೀಯ ದತ್ತು ಕುರಿತಂತೆ ಸರ್ವೋಚ್ಚ ನ್ಯಾಯಾಲಯದ ತೀರ್ಪು | The Supreme Court Judgement on Inter Country Adoption | 21 |
| 1986 | Criminal Law | ಮಕ್ಕಳಿಗೆ ನ್ಯಾಯ ಕಾನೂನು | Juvenile Justice Act | 1, 5, 12, 16, 19, 20, 21, 25, 33, 37, 40 |
| 1986 | Labour Law | ಬಾಲ ಕಾರ್ಮಿಕ ಪದ್ಧತಿ (ನಿಷೇಧ ಮತ್ತು ನಿಯಂತ್ರಣ) ಕಾನೂನು | Child Labour (Prohibition and Regulation) Act | 31, 32 |
| 1987 | | ಅಂಗವಿಕಲ ಮಕ್ಕಳ ಸಮಗ್ರ ಶಿಕ್ಷಣ | Integrated Education for Disabled Children | 23 |
| 1988 | Criminal Law | ಮಾದಕ ವಸ್ತುಗಳು ಮತ್ತು ಭ್ರಾಮಕಾರಕ ವಸ್ತುಗಳ ಕಳ್ಳಸಾಗಣೆ ತಡೆ ಕಾನೂನು | The Prevention of Illicit Traffic in Narcotic Drugs and Psychotropic Substances Act | 33 |
| 1992 | Criminal Law | ಪರ್ಯಾಯ ಶಿಶು ಆಹಾರ, ಹಾಲು ಮತ್ತು ಹಾಲು ಕುಡಿಸುವ ಶೀಶೆ ಕಾನೂನು | Infant Milk substitution, feeding bottle and Infant Food Act | 24 |
| 1993 | Social Legn. | ಮಾನವ ಹಕ್ಕುಗಳ ರಕ್ಷಣೆ ಕಾನೂನು | The Protection of Human Rights Act | |
| 1994 | Criminal Law | ಹೆರಿಗೆಪೂರ್ವ ಪರೀಕ್ಷಾ ತಂತ್ರಗಳ (ನಿಯಂತ್ರಣ ಮತ್ತು ದುರುಪಯೋಗ ತಡೆ) ಕಾನೂನು | The Pre-natal Diagnostic Techniques (Regulation and Prevention of Misuse) Act | 6 |
| 1995 | Social Legn. | ಅಂಗವಿಕಲರ (ಸಮಾನ ಅವಕಾಶ, ಹಕ್ಕುಗಳ ರಕ್ಷಣೆ ಹಾಗೂ ಪೂರ್ಣವಾಗಿ ಭಾಗವಹಿಸುವ ಹಕ್ಕು) ಕಾನೂನು | The person with Disability (Equal Opportunities, protection of Rights and full protection) Act | 23 |
| 1995 | Social Legn. | ಕೇಬಲ್ ದೂರದರ್ಶನ ಜಾಲ (ನಿಯಂತ್ರಣ) ಕಾನೂನು | The Cable Television Network (Regulation) Act | 17 |
| 1996 | | ಬಾಲ ಕಾರ್ಮಿಕ ಪದ್ಧತಿ ಕುರಿತು ಸರ್ವೋಚ್ಚ ನ್ಯಾಯಾಲಯದ ತೀರ್ಪು | Supreme Court Judgement on Child Labour | 32 |

# ಆಕರಗಳು

1. The State Programme of Action for the Child, GOK, 1994
2. The Right to be a Child, UNICEF, August 1994.
3. The Indian Child, CRY, 1999.
4. Thc Child and the Law, Gita Ramaswamy, UNICEF and AP Judicial Academy, Hyderabad, 1996.
5. The Best Interest of Child, Innocent Studies, UNICEF, 1996.
6. Rights of the Child, UNICEF and Directorate of Women and Child Development, GOK., 1991.
7. News Paper reports and clippings.
8. Mina, a series of films by UNICEF on Child Rights.
9. ಮಕ್ಕಳ ಹಕ್ಕುಗಳು, ಭಿತ್ತಿ ಚಿತ್ರಗಳ ತರಬೇತಿ ಸಾಮಗ್ರಿ, ಕ್ರೈ, ಬೆಂಗಳೂರು.
10. ಮಕ್ಕಳ ಹಕ್ಕುಗಳ ಒಡಂಬಡಿಕೆ ಜಾರಿ ಸೂಚಕಗಳು (ಕನ್ನಡ ಅನುವಾದ-ಕ್ರೈ), ಯುನಿಸೆಫ್ 1997.
11. ಮಕ್ಕಳ ಹಕ್ಕುಗಳ ಒಡಂಬಡಿಕೆ (ಕನ್ನಡ) UNICEF and GOI, 1994.
12. Facts about Rights of the Child, Vu Ngoc Binh, National Political Publicity House, Hanoi, Vietnam, 1996.
13. Discussions with friends, colleagues and children.
14. CRC Country Report - India, GOI, Feb. 1997.
15. Comparative Study of the UN Convention on the Rights of the Child and Indian Laws, National Centre for Advocacy Studies, Pune, July, 1996.
16. A Practical Training Manual on Child Rights, (Based on ISCA and UNICEF training package), MSS 1996.
17. The Child & Law in India, ICCW, Chennai 1988.

# ಮಕ್ಕಳ ಹಕ್ಕುಗಳ ಒಡಂಬಡಿಕೆ

## ಚರ್ಚೆಗಾಗಿ ಲೇಖನಗಳು

1989ರಲ್ಲಿ ಜಾರಿಗೆ ಬಂದ 'ಮಕ್ಕಳ ಹಕ್ಕುಗಳ ಒಡಂಬಡಿಕೆ' (CRC-Convention on the Rights of the Child) ಮಕ್ಕಳನ್ನು ಕರಿತು ಇರುವ ಒಂದು ಅರ್ಥಪೂರ್ಣ ದಾಖಲೆ. ಭಾರತ 1992ರಲ್ಲಿ ಈ ಒಡಂಬಡಿಕೆಗೆ ಸಹಿ ಹಾಕಿತು.

ಮಕ್ಕಳ ಹಕ್ಕುಗಳ ಬಗ್ಗೆ ಅಲ್ಲಲ್ಲಿ ತೀರಾ ಇತ್ತೀಚೆಗೆ ಮಾತುಕತೆ ಆರಂಭವಾಗಿದೆ. ಆದರೆ ಈ ಒಡಂಬಡಿಕೆಯ ಒಳಹೊಕ್ಕು ಅದರ ವಿವರಗಳನ್ನು ತಿಳಿದವರ ಸಂಖ್ಯೆ ಕಡಿಮೆ. ಮಕ್ಕಳ ಹಕ್ಕುಗಳ ಬಗ್ಗೆ ವ್ಯಾಪಕ ಪ್ರಚಾರವಾಗಲೀ, ತರಬೇತಿಗಳಾಗಲಿ ಅಷ್ಟೊಂದು ಸಂಖ್ಯೆಯಲ್ಲಿ ಆಗಿಲ್ಲ.

ಭಾರತ ಸರ್ಕಾರ ತಾನು ಒಪ್ಪಿರುವ ಮಕ್ಕಳ ಹಕ್ಕುಗಳ ಒಡಂಬಡಿಕೆಯನ್ನು ಹೇಗೆ ಜಾರಿಮಾಡುತ್ತಿದ್ದೇನೆ ಎಂದು ಈಗಾಗಲೇ ವಿಶ್ವಸಂಸ್ಥೆಯ ಸಮಿತಿಗೆ ವರದಿ ಕಳುಹಿಸಿದೆ. ಭಾರತದಿಂದ ಏಳು ಪರ್ಯಾಯ ವರದಿಗಳೂ ಸಹ ವಿಶ್ವಸಂಸ್ಥೆಗೆ ತಲುಪಿವೆ. ಎರಡನೇ ವರದಿ ಕಳುಹಿಸುವ ಸಮಯ ಈಗ ಬಂದಿದ್ದು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಅನೇಕ ಇಲಾಖೆಗಳು ಮಕ್ಕಳನ್ನು ಕುರಿತ ವಿವರಗಳನ್ನು ಸಂಗ್ರಹಿಸುವ ಮತ್ತು ಸ್ವಯಂಸೇವಾ ಸಂಘಗಳ ಸಹಾಯವನ್ನು ಕೇಳುವ ಹಂತದಲ್ಲಿವೆ.

ಮಕ್ಕಳ ಹಕ್ಕುಗಳ ಜಾರಿಯ ಬಗ್ಗೆ ನಿಮ್ಮ ಅಭಿಪ್ರಾಯಗಳಿಗೂ ಸ್ಥಾನವಿದೆ. ಹಕ್ಕುಗಳ ಜಾರಿ ಅಥವಾ ಉಲ್ಲಂಘನೆಯ ಬಗ್ಗೆ ವಿವರ ಕೊಡುವ ಅಭಿಲಾಷೆ ನಿಮಗಿದ್ದಲ್ಲಿ ನೀವು ಮಕ್ಕಳ ಹಕ್ಕುಗಳ ಒಡಂಬಡಿಕೆಯನ್ನು ವಿವರವಾಗಿ ಓದಲೇಬೇಕು.

ಈ ಹಿನ್ನೆಲೆಯಲ್ಲಿ ಮಕ್ಕಳ ಹಕ್ಕುಗಳ ಒಡಂಬಡಿಕೆಯನ್ನು ಜನಸಮೂಹದ ಬಳಿಗೆ ತೆಗೆದುಕೊಂಡು ಹೋಗುವ ಪ್ರಯತ್ನವೇ 'ಮಕ್ಕಳ ಹಕ್ಕುಗಳ ಒಡಂಬಡಿಕೆ'-ಚರ್ಚೆಗಾಗಿ ಲೇಖನಗಳು ಪುಸ್ತಕದ ಪ್ರಕಟಣೆ.

**ಈ ಪುಸ್ತಕದ ಮುಖ್ಯಾಂಶಗಳು:**

- ಮಕ್ಕಳ ಹಕ್ಕುಗಳ ಒಡಂಬಡಿಕೆಯ ಜಾರಿಯ ಚಾರಿತ್ರಿಕ ಹಿನ್ನೆಲೆ.
- ಮಕ್ಕಳ ಹಕ್ಕುಗಳ ಒಡಂಬಡಿಕೆಯ ಎಲ್ಲ 54 ಪರಿಚ್ಛೇದಗಳನ್ನು ಕುರಿತು ಸರಳವಾದ ವಿವರಣೆ.
- ಪ್ರತಿ ಪರಿಚ್ಛೇದದಲ್ಲಿ ವಿವರಿಸಿರುವ ಮಕ್ಕಳಿಗೆ ಸಂಬಂಧಿಸಿದ ವಿಚಾರಗಳನ್ನು ಭಾರತದಲ್ಲಿ ಈಗಾಗಲೇ ಜಾರಿಯಲ್ಲಿರುವ ಸಂವಿಧಾನವನ್ನೂ ಒಳಗೊಂಡಂತೆ ವಿವಿಧ ಕಾನೂನುಗಳನ್ನು ಪರಿಶೀಲಿಸಿ ಪರಿಚಯ.
- ಪರಿಚ್ಛೇದಗಳನ್ನು ನಮ್ಮ ಪರಿಸರದಲ್ಲಿ ಅರ್ಥಮಾಡಿಕೊಳ್ಳಲು ನೆರವಾಗುವ ಅಭ್ಯಾಸಗಳು.
- ಮಕ್ಕಳ ಹಕ್ಕುಗಳ ಒಡಂಬಡಿಕೆಯ ಜಾರಿಯ ಉಸ್ತುವಾರಿಗೆ ನೆರವಾಗಬಲ್ಲ ವಿಚಾರಗಳು, ಅಂಕಿ-ಅಂಶಗಳನ್ನು ಕಲೆಹಾಕಲು ಮತ್ತು ಅವುಗಳ ವಿಶ್ಲೇಷಣೆ ಮಾಡಿ ವರದಿ ತಯಾರಿಸಲು ಸಲಹೆ.

ಮಕ್ಕಳ ಹಕ್ಕುಗಳ ಒಡಂಬಡಿಕೆಯನ್ನು ಕುರಿತು ಕನ್ನಡದಲ್ಲಿ ಬಂದಿರುವ ಈ ಮೊದಲ ಪುಸ್ತಕ ಪ್ರತಿಯೊಂದು ಸ್ವಯಂಸೇವಾ ಸಂಘಗಳು ಹಾಗೂ ಮಕ್ಕಳೊಡನೆ ಒಡನಾಡುವ ಪ್ರತಿಯೊಬ್ಬರ ಬಳಿ ಇರಲೇಬೇಕು.



ಸಂವಹನ

ರೂ.85/-